# ವಚನಗಳ ಇಂಗ್ಲಿಷ್ ಅನುವಾದ : ಒಂದು ಅಧ್ಯಯನ

## (ಬಸವಣ್ಣನವರ ವಚನಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾ ನಿಕಾಯಕ್ಕೆ ಪಿಎಚ್.ಡಿ ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ

ಪಾಟೀಲ ಶಿವಲಿಂಗಪ್ಪ ಶಿವಮೂರ್ತೆಪ್ಪ

ಮಾರ್ಗದರ್ಶಕರು

ಡಾ.ಎಸ್ ಕೆ ಕೊಪ್ಪಾ

ಪ್ರಾಧ್ಯಾಪಕರು

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಚನ ಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನ ಕೇಂದ್ರ

ವಿಜಾಪುರ-೫೮೬೧೦೩

೨೦೧೦

# ವಚನಗಳ ಇಂಗ್ಲಿಷ್ ಅನುವಾದ : ಒಂದು ಅಧ್ಯಯನ

## (ಬಸವಣ್ಣನವರ ವಚನಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾ ನಿಕಾಯಕ್ಕೆ ಪಿಎಚ್.ಡಿ ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ)





ಸಂಶೋಧಕ

**ಪಾಟೀಲ ಶಿವಲಿಂಗಪ್ಪ ಶಿವಮೂರ್ತೆಪ್ಪ**

ಮಾರ್ಗದರ್ಶಕರು

**ಡಾ.ಎಸ್.ಕೆ.ಕೊಪ್ಪಾ**

ಪ್ರಾಧ್ಯಾಪಕರು





ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಚನ ಪಿತಾಮಹ ಡಾ.ಫ.ಗು.ಹಳಕಟ್ಟಿ ಸಂಶೋಧನ ಕೇಂದ್ರ

ವಿಜಾಪುರ

೨೦೧೦

# ಪ್ರಮಾಣಪತ್ರ

"ವಚನಗಳ ಇಂಗ್ಲಿಷ್ ಅನುವಾದ : ಒಂದು ಅಧ್ಯಯನ (ಬಸವಣ್ಣನವರ ವಚನಗಳನ್ನು ಅನುಲಕ್ಷಿಸಿ)" ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಡಾ.ಎಸ್.ಕೆ,ಕೊಪ್ಪಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಭಾಷ ನಿಕಾಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ವಿಜಾಪುರ

೧೭-೬-೨೦೧೦

ಪಾಟೀಲ ಶಿವಲಿಂಗಪ್ಪ ಶಿವಮೂರ್ತೆಪ್ಪ
ವಚನ ಪಿತಾಮಹ ಡಾ.ಫ.ಗು.ಹಳಕಟ್ಟಿ
ಸಂಶೋಧನ ಕೇಂದ್ರ
ವಿಜಾಪುರ

# ದೃಢೀಕರಣ ಪತ್ರ

"ವಚನಗಳ ಇಂಗ್ಲಿಷ್ ಅನುವಾದ : ಒಂದು ಅಧ್ಯಯನ (ಬಸವಣ್ಣನವರ ವಚನಗಳನ್ನು ಅನುಲಕ್ಷಿಸಿ)" ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಪಾಟೀಲ ಶಿವಲಿಂಗಪ್ಪ ಶಿವಮೂರ್ತೆಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು; ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ವಿಜಾಪುರ
೧೭-೬-೨೦೧೦

ಡಾ.ಎಸ್.ಕೆ.ಕೊಪ್ಪಾ
ಪ್ರಾಧ್ಯಾಪಕರು
ಪದವಿ ಕಾಲೇಜು, ಇಂಡಿ

# ಮನದಾಳದ ವಚನ

ಪ್ರಸ್ತುತ ಅಧ್ಯಯನ ಕೈಗೊಳ್ಳಲು ನನಗೆ ಮೂಲಪ್ರೇರಣೆ ವಿಶ್ರಾಂತ ಕುಲಪತಿ, ಸಂಶೋಧಕ ಡಾ.ಎಂ.ಎಂ.ಕಲಬುರ್ಗಿಯವರು ಈ ಮಹತ್ವಪೂರ್ಣ ವಿಷಯದ ಬಗೆಗೆ ನನ್ನ ಗಮನ ಸೆಳೆದು, ಉದ್ದಕ್ಕೂ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸಿದ ಅವರಿಗೆ ಋಣಿಯಾಗಿದ್ದೇನೆ.

ವಚನಗಳ ಇಂಗ್ಲಿಷ್ ಅನುವಾದ ಕುರಿತು ಪಿಎಚ್.ಡಿ. ಅಧ್ಯಯನ ಮಾಡುವುದನ್ನು ತಿಳಿದು ಸಂತೋಷ ಪಟ್ಟವರು, ವಿಜಾಪುರ ಜ್ಞಾನಯೋಗಾಶ್ರಮದ ಪರಮಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು. ಈ ವಿಷಯವನ್ನು ಚರ್ಚಿಸಿ, ಉಪಯುಕ್ತ ಸೂಚನೆಗಳನ್ನು ನೀಡಿ ಆಶೀರ್ವದಿಸಿದ ಪೂಜ್ಯರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ವಚನಪಿತಾಮಹ ಡಾ.ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರದ ಆಶ್ರಯದಲ್ಲಿ ವಚನಗಳನ್ನು ಕುರಿತು ಅಧ್ಯಯನ ಕೈಕೊಂಡುದು ಈ ಸಂಸ್ಥೆಯ ಪಿಎಚ್.ಡಿ ಪ್ರಥಮ ವಿದ್ಯಾರ್ಥಿಯಾಗಿ ಪ್ರಬಂಧ ಸಲ್ಲಿಸುತ್ತಿರುವುದು ನನ್ನಲ್ಲಿ ಧನ್ಯತೆಯನ್ನುಂಟು ಮಾಡಿದೆ. ನನಗೆ ಸಂಶೋಧನೆ ಮಾಡಲು ಸ್ಫೂರ್ತಿ ತುಂಬಿದ ಈ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್.ಎಸ್. ತಂಬಾಕೆ, ಹಿರಿಯ ವಿದ್ವಾಂಸರಾದ ಪ್ರೊ.ಎ.ಎಸ್.ಹಿಪ್ಪರಗಿ, ಡಾ.ಕೃಷ್ಣ ಕೊಲ್ಹಾರ ಕುಲಕರ್ಣಿ, ನನ್ನಲ್ಲಿರುವ ಶಕ್ತಿಯನ್ನು ನನಗರಿವಿಲ್ಲದಂತೆ ಹೊರತೆಗೆದ ಮಾರ್ಗದರ್ಶಕರಾದ ಡಾ.ಎಸ್.ಕೆ.ಕೊಪ್ಪಾ ಅವರಿಗೆ ಋಣಿಯಾಗಿದ್ದೇನೆ. ಸ್ನೇಹಿತರಾದ ಡಾ. ಎಂ.ಎಂ.ಪಡಶೆಟ್ಟಿ, ಡಾ.ಎಮ್.ಎಸ್. ಮದಭಾವಿ, ಡಾ.ಗುರುಪಾದ ಮರಿಗುದ್ದಿ ಮತ್ತು ಡಾ.ಬಿ.ಎಸ್.ಗೊರವರ ಅವರನ್ನೆಲ್ಲ ಸ್ಮರಿಸುತ್ತೇನೆ.

ಬಬಲೇಶ್ವರದ "ಗ್ರಾಮಾಂತರ ವಿದ್ಯಾ ವರ್ಧಕ ಸಂಘ"ದ ಎಲ್ಲ ಪದಾಧಿಕಾರಿಗಳಿಗೆ, ಅದರಲ್ಲೂ ಪ್ರಧಾನಕಾರ್ಯದರ್ಶಿ ಶ್ರೀ ವ್ಹಿ.ಎನ್.ಬಿರಾದಾರ ಮತ್ತು ನಿಕಟಪೂರ್ವ ಪ್ರಧಾನಕಾರ್ಯದರ್ಶಿ ಶ್ರೀ ಜಿ.ಎಸ್.ಯಾದವಾಡ, ಆಡಳಿತ ಮಂಡಳಿಯ ಸದಸ್ಯರಾದ ಶ್ರೀ ಎಸ್.ಎಸ್.ಬಿರಾದಾರ(ಕಡೆಮನಿ), ಶ್ರೀ.ಆರ್.ಬಿ.ಬಿರಾದಾರ ಮತ್ತು ಶ್ರೀ ಸಿ.ಎಮ್.ಡೆಂಗನವರ, ಇವರೆಲ್ಲರ ಪ್ರೋತ್ಸಾಹಗಳಿಗೆ ನಾನು ಸದಾ ಉಪಕೃತನಿದ್ದೇನೆ.

ಆಕರ ಗ್ರಂಥಗಳನ್ನು ಸಂಗ್ರಹಿಸುವ ಸಂದರ್ಭದಲ್ಲಿ ತಮ್ಮ ಸಂಸ್ಥೆಯ ಕೃತಿಗಳನ್ನು ಆಶೀರ್ವಾದಪೂರಕವಾಗಿ ಕೊಡಮಾಡಿದ ಚಿತ್ರದುರ್ಗದ ಶ್ರೀ ಶಿವಮೂರ್ತಿ ಮುರುಘಾಶರಣರಿಗೂ, ಭಾಲ್ಕಿಯ ಶ್ರೀ ಬಸವಲಿಂಗ ಮಹಾಸ್ವಾಮಿಗಳಿಗೂ ನನ್ನ ಪ್ರಣಾಮಗಳು. ಬಸವ ಸಮಿತಿಯ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿಯವರಿಗೂ ಮತ್ತು ಅಲ್ಲಿಯ ಗ್ರಂಥಪಾಲಕರಾದ ಶ್ರೀ ದೇಸಾಯಿಯವರಿಗೂ, ಗುಲ್ಬರ್ಗದ ಶ್ರೀ.ವ್ಹಿ.ಎಚ್.ಅಗರಖೇಡ, ಕರ್ನಾಟಕ ವಿಶ್ವ ವಿದ್ಯಾಲಯದ ಗ್ರಂಥಪಾಲರಾದ ಡಾ.ಎಸ್.ಬಿ. ಪಾಟೀಲ, ಡಾ.ಆರ್.ಎಮ್ ವಟ್ನಾಳ ಅವರಿಗೂ, ಬೆಳಗಾವಿ ನಾಗನೂರು ಮಠದ ಲಿಂಗಾಯತ ಸಂಶೋಧನ ಕೇಂದ್ರದ ಗ್ರಂಥಪಾಲರಾದ ಶ್ರೀ ಬಿ.ಬಿ.ಹೊಸಮನಿಯವರಿಗೂ ನನ್ನ ಕೃತಜ್ಞತೆಗಳು. ನನ್ನ ಪ್ರಯತ್ನದಲ್ಲಿ ಸಹಕರಿಸಿದ ತೋರಿಸಿದ ಹುಕ್ಕೇರಿ ಮಹಾವಿದ್ಯಾಲಯದ ಪ್ರಿ.ಎ.ಎಮ್.ನದಾಫ, ಪ್ರೊ.ಶೇಷಾಚಲ ಹವಾಲ್ದಾರ, ಪ್ರೊ.ಎನ್.ವ್ಹಿ.ಹಂಜಗಿ, ಡಾ.ಎನ್.ಎಸ್.ಗುಂಡೂರ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಪ್ರೊ.ಆರ್.ಎಮ್.ಗಿರ್ಜಿ, ಡಾ.ಅರವಿಂದ ಮೂಲಿಮನಿ, ಅವರಿಗೂ ನಾನು ಉಪಕೃತ.

ಸಂಶೋಧನೆಗೆ ಪೂರಕವಾಗಿ ಆಗಾಗ ಸಲಹೆ ನೀಡಿದ ಹಿರಿಯರಾದ ಡಾ.ಸಿ.ಆರ್.ಯರವಿನತೆಲಿಮಠ, ಡಾ.ಓ.ಎಲ್.ನಾಗಭೂಷಣಸ್ವಾಮಿ, ಡಾ.ಪ್ರಭುಶಂಕರ, ಡಾ.ಜಿ.ವ್ಹಿ.ಕುಲಕರ್ಣಿ, ಡಾ.ಡಿ.ಎ.ಶಂಕರ್, ಡಾ.ವಿಜಯಕುಮಾರ ಬೋರಟ್ಟಿ, ಡಾ.ಎಸ್.ಆರ್.ಗುಂಜಾಳ ಅವರನ್ನೆಲ್ಲ ನಾನು ಸ್ಮರಿಸುತ್ತೇನೆ.

ನನ್ನ ಈ ಕಾರ್ಯಗಳಲ್ಲಿ ಆಸ್ಥೆ ತೋರಿ, ಸಹಕಾರ ನೀಡಿದ ನನ್ನ ಮಹಾವಿದ್ಯಾಲಯದ ಸಮಸ್ತ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ಅದರಲ್ಲೂ ಶ್ರೀ ಸುರೇಶ ಬಾಗೋಜಿಕೊಪ್ಪ ಅವರ ಸಹಾಯವನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಬಾಲ್ಯದಲ್ಲಿಯೇ ಸುಶ್ರಾವ್ಯವಾಗಿ ವಚನಗಾಯನವನ್ನು ಉಣಬಡಿಸಿ, ವಚನ ಸಂಸ್ಕಾರವನ್ನು ನೀಡಿದ ನನ್ನ ತಂದೆ ದಿ. ಶಿವಮೂರ್ತೆಪ್ಪ ಪಾಟೀಲ ಮತ್ತು ತಾಯಿ ಶ್ರೀಮತಿ ಕಾಶೀಬಾಯಿ ಪಾಟೀಲ ಇವರನ್ನು ಚಿರಕಾಲ ಸ್ಮರಿಸುತ್ತೇನೆ.

ನನ್ನೆಲ್ಲ ಕೆಲಸಗಳಿಗೆ ಸ್ಫೂರ್ತಿಯಾಗಿ, ಬೆನ್ನೆಲುಬಾಗಿ ನಿಂತ ನನ್ನ ಸಹಧರ್ಮಿಣಿ ಶ್ರೀಮತಿ ವಿಜಯಲಕ್ಷ್ಮಿ, ಮಕ್ಕಳಾದ ಆನಂದ, ಅಶ್ವಿನಿ ಮತ್ತು ಅರುಣ, ಸಹೋದರನ ಮಗ ಡಾ. ಬಸವರಾಜ ತಲ್ಲೂರ, ಇವರೆಲ್ಲರನ್ನೂ ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಕೊನೆಯದಾಗಿ ಪ್ರಬಂಧದ ವಿನ್ಯಾಸವನ್ನು ಸಿದ್ಧಪಡಿಸುವಲ್ಲಿ ಶ್ರಮಿಸಿದ ಕುಮಾರ ಬಡಿಗೇರ ಅವರನ್ನೂ ನೆನೆಯುತ್ತೇನೆ.

**–ಶಿವಲಿಂಗಪ್ಪ ಎಸ್. ಪಾಟೀಲ**

ರೂಢಮೂಲ ವ್ಯವಸ್ಥೆಯ ವಿರುದ್ಧ ಧ್ವನಿಯೆತ್ತಿ, ಹೊಸ ಸಮಾಜ ರಚನೆಗೆ ಹಂಬಲಿಸಿದವರಲ್ಲಿ ಕರ್ನಾಟಕದ ಶಿವಶರಣರು ಪ್ರಮುಖರು. ವ್ಯಕ್ತಿಶುದ್ಧಿಯ ಮೂಲಕ ಇಡೀ ಸಮಾಜಶುದ್ಧಿಗೆ ತೊಡಗಿದ ಶರಣರು, ಆತ್ಮಕಲ್ಯಾಣದೊದಿಗೆ ಲೋಕಕಲ್ಯಾಣವನ್ನೂ ಸಾಧಿಸಿದ್ದಾರೆ. ಹೀಗಾಗಿ ಅವರ ವಿಚಾರ ಸರಣಿ ವಿಶ್ವಮಾನವಪ್ರಜ್ಞೆಯದು; ಅವರು ಕಂಡ ಸತ್ಯ ಸಾರ್ವಕಾಲಿಕವಾದುದು.

ಶರಣರ ಆಂದೋಲನದ ನೇರ ಧ್ವನಿಯೇ ವಚನ ಸಾಹಿತ್ಯ. ಅಂದಿನ ಸನ್ನಿವೇಶಕ್ಕೆ ಅನುಗುಣವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಅಂಕುರಿಸಿದ ಈ ಅಂದೋಲನ ಮುಖ್ಯವಾಗಿ ಸಾಮಾಜಿಕ ಕ್ಷೇತ್ರವನ್ನೂ ಪ್ರಭಾವಿಸಿದ ಕಾರಣ, ಇದನ್ನು ಸಮಾಜೋಧಾರ್ಮಿಕ ಅಂದೋಲನವೆಂದು ಗುರುತಿಸಲಾಗುತ್ತಿದೆ. "ಸಂಸ್ಕೃತದ ಹಿರಿಮೆ ಸಡಲಿ, ಕನ್ನಡದ ಹೆಚ್ಚಳ ಬೆಳೆದುದು ಈ ವಚನ ಸಾಹಿತ್ಯದಿಂದ. ಪದ್ಯದ ವ್ಯಾಮೋಹ ಸರಿದು ಗದ್ಯಕ್ಕೆ ಪುರಸ್ಕಾರ ದೊರೆತುದು ಈ ವಚನ ಸಾಹಿತ್ಯದಿಂದ. ಬಹುಕಾಲದಿಂದಲೂ ಪಂಡಿತರ ತುತ್ತಾಗಿದ್ದ, ವಿಶಿಷ್ಟವರ್ಗದವರ ಸೊತ್ತಾಗಿದ್ದ, ರಾಜ್ಯಲಕ್ಷ್ಮಿಯ ತೊತ್ತಾಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ, ತಮ್ಮ ಅನುಭವದ ಕಮ್ಮಟದಲ್ಲಿಯೇ ಅಚ್ಚೊತ್ತಿದ್ದ ವಚನ ನಾಣ್ಯಗಳನ್ನು ಜನಸಾಮಾನ್ಯರೆಲ್ಲರಲ್ಲಿ ಸಲ್ಲುವಂತೆ ಹರಡಿಸಿದವರು, ವಚನಕಾರರು. ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ, ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರದು"[೧]. ಈ ಅಪೂರ್ವಸಾಹಿತ್ಯವನ್ನು ಫ.ಗು.ಹಳಕಟ್ಟಿ ಮೊದಲು ಮಾಡಿ ಅನೇಕ ಜನ ವಿದ್ವಾಂಸರು, ಅನೇಕ ಸಂಸ್ಥೆಗಳು ಬೆಳಕಿಗೆ ತರಲು ಕಳೆದ ಶತಮಾನದಿಂದ ದುಡಿಯುತ್ತಲೇ ಬಂದಿದ್ದಾರೆ. ಈ ಅವಧಿಯಲ್ಲಿ ಫ.ಗು.ಹಳಕಟ್ಟಿ ಪೂರ್ವಯುಗ, ಹಳಕಟ್ಟಿಯುಗ, ಹಳಕಟ್ಟಿ ತರುವಾಯದ ಯುಗಗಳು ಕಾಣಿಸಿಕೊಂಡಿವೆ. ಇದರ ಫಲವಾಗಿ ಎಲ್ಲ ಶರಣರ ಎಲ್ಲ ವಚನಗಳು ಅಂದರೆ ಸುಮಾರು ೨೧ಸಾವಿರ ವಚನಗಳು ಬೆಳಕು ಕಂಡಿವೆ.

ಹೀಗೆ ವಚನ ಸಾಹಿತ್ಯ ಸಾಮಾನ್ಯವಾಗಿ ಪೂರ್ಣ ಪ್ರಮಾಣದಲ್ಲಿ ಬೆಳಕು ಕಾಣುತ್ತ ಬರುವುದರ ಜೊತೆ ಇದರ ಅನುವಾದ ಕಾರ್ಯವೂ ಅಗತ್ಯವೆಂದು ವಿದ್ವಾಂಸರು ಭಾವಿಸಿದರು. ಈ ಭಾವನೆಗೆ ೧೫ನೇಯ ಶತಮಾನದಷ್ಟು ಪ್ರಾಚೀನ ಇತಿಹಾಸವಿದೆ. ಇದಕ್ಕೆ ಏಕೈಕ ಉದಾಹರಣೆಗೆ ಅಲ್ಲಮನ ೬೫೮ ವಚನಗಳನ್ನು

ಮಗ್ಗೆಯ ಮಾಯಿದೇವ 'ಪ್ರಭುಗೀತಾ' ಹೆಸರಿನಿಂದ ಸಂಸ್ಕೃತಕ್ಕೆ ಅನುವಾದಿಸಿದುದು. ಪ್ರಾಚೀನ ಕಾಲದಲ್ಲಿ ಕನ್ನಡೇತರರಿಗೂ ವಾಹಕವಾದ ಏಕೈಕ ಭಾಷೆ ಸಂಸ್ಕೃತ. ಆದುದರಿಂದ ಇಂಥ ಪ್ರಯತ್ನ ಅಂದು ಅಲ್ಲಮನ ವಿಷಯವಾಗಿ ಜರುಗಿತು. ಇದನ್ನು ಬಿಟ್ಟರೆ ಬಸವಣ್ಣನವರ ವಚನಗಳು ತೆಲಗು ಬಸವಪುರಾಣಮುವಿನಲ್ಲಿ ಆಗಾಗ ಭಾವಾನುರೂಪದಲ್ಲಿ ಕಾಣಿಸಿಕೊಂಡಿವೆ. ಇದೇನೇ ಇದ್ದರೂ ತುಂಬ ಸೀಮಿತ ಕೆಲಸ. ಆಂಗ್ಲರ ಸಂಪರ್ಕ ಕಾರಣವಾಗಿ 'ಅನುವಾದ' ಕ್ಷೇತ್ರ ಬಹುಮುಖಿಯಾಗಿ ಬೆಳಯ ಹತ್ತಿತು. ಬೇರೆ ಭಾಷೆಗಳ ಸಾಹಿತ್ಯವನ್ನು ಕನ್ನಡಕ್ಕೂ, ಕನ್ನಡ ಸಾಹಿತ್ಯವನ್ನು ಬೇರೆ ಭಾಷೆಗಳಿಗೂ ಭಾಷಾಂತರಿಸುವ ಕೆಲಸ ನಮ್ಮ ನಾಡಿನ ಒಳ-ಹೊರಗೆ ಆರಂಭವಾಯಿತು. ಇದರ ಫಲವಾಗಿ ಭಾರತೀಯ, ವಿದೇಶೀಯ ಭಾಷೆಗಳಿಗೆ ವಚನಗಳನ್ನು ಅನುವಾದಿಸುವದಕ್ಕೆ ವಿದ್ವಾಂಸರು ನಿರತರಾದರು. ಹೀಗಿದ್ದು ಅನುವಾದವೆಂದರೆ ಇಂಗ್ಲಿಷ್ ಭಾಷೆಗೇ ಎಂಬಂತೆ ಈ ಕಾರ್ಯ ಜರುಗಿದುದನ್ನು ಇಲ್ಲಿ ಗಮನಿಸಬಹುದು.

ಶರಣರು ಬದುಕಿ-ಬಾಳಿದ್ದು ಕನ್ನಡ ನಾಡಿನಲ್ಲಿ, ಬರೆದದ್ದು ಕನ್ನಡ ಭಾಷೆಯಲ್ಲಿ. ಈ ಭಾಷಿಕ ಪರಿಮಿತಿ ಕಾರಣವಾಗಿ ಅವರಿಗೆ ನ್ಯಾಯವಾಗಿ ಸಿಗಬೇಕಾದ ಜಾಗತಿಕ ಪ್ರಸಿದ್ಧಿ ಇನ್ನೂ ಸಿಕ್ಕಿಲ್ಲ. "ವಚನ ಎನ್ನುವುದು ಕನ್ನಡದಲ್ಲಿ ವಿಶಿಷ್ಟ ಸಾಹಿತ್ಯಪ್ರಕಾರವೊಂದಕ್ಕೆ ಹೆಸರು. ಅನ್ಯಭಾಷೆಗಳ ಯಾವುದೇ ಮಾದರಿಯನ್ನೂ ಯಾವುದೇ ದೃಷ್ಟಿಯಿಂದಲೂ ಅನುಕರಿಸದೆ ಅಥವಾ ಆದರ್ಶವಾಗಿಟ್ಟುಕೊಳ್ಳದೆ ಕೇವಲ ಅನುಭವದಿಂದಲೇ ಮೂಡಿ ರೂಪಿತವಾದ ಈ ಪ್ರಕಾರವು ಕನ್ನಡದ ಹೆಮ್ಮೆಯಾಗಿದೆ, ವಿಶ್ವಸಾಹಿತ್ಯಕ್ಕೆ ಕನ್ನಡವು ಸಲ್ಲಿಸಿರುವ ಕಾಣಿಕೆಯಾಗಿದೆ"[೨]. ಹೀಗೆ ಹುಟ್ಟಿಕೊಂಡ ವಚನಸಾಹಿತ್ಯ ಸಹಜವಾಗಿಯೇ ಕನ್ನಡ-ಕನ್ನಡೇತರ ವಿದ್ವಾಂಸರ ಗಮನ ಸೆಳೆಯಿತು. ಆಗ ಇಂಗ್ಲಿಷ್ ಬಲ್ಲ, ಕನ್ನಡ ಭಾಷೆಯಲ್ಲಿ ಪರಿಣಿತರಾದ ವಿದ್ವಾಂಸರು ತಮಗೆ ತಿಳಿದುದನ್ನು, ಅನುಭವಿಸಿದ್ದನ್ನು ಕನ್ನಡೇತರರಿಗೆ ತಿಳಿಸುವ ಉತ್ಕಟ ಬಯಕೆಯ ಫಲಶ್ರುತಿಯೇ ಅವರ ವಚನ ಅನುವಾದಗಳು. ಒಂದು ಭಾಷೆಯ ಸಾಹಿತ್ಯದ ಶ್ರೀಮಂತಿಕೆಯನ್ನು ಬೇರೊಂದು ಭಾಷೆಗೆ ಯಥಾವತ್ತಾಗಿ ಕೊಂಡೊಯ್ಯುವುದು ಅನುವಾದಕನ ಆದ್ಯಕರ್ತವ್ಯ. ಒಂದು ಸಮೂಹದ ಅನುಭವದ್ರವ್ಯ ಮತ್ತೊಂದು ಸಮೂಹದ ಸಾಂಸ್ಕೃತಿಕ ಬದುಕಿನಲ್ಲಿ ಮಿಳಿತವಾಗುವುದರಿಂದ, ಚಿಂತನೆಗಳ ಗಡಿ ವಿಸ್ತಾರಗೊಂಡು, ಅದಕ್ಕೆ ವ್ಯಾಪಕತೆ ಪ್ರಾಪ್ತವಾಗುತ್ತದೆ.

ಪ್ರಾಯಶಃ ಈ ಹಿನ್ನೆಲೆಯಲ್ಲಿಯೇ, ಎಲ್ಲ ಕಾಲ-ದೇಶಗಳಲ್ಲಿಯೂ ಈ ಪ್ರಕ್ರಿಯೆ ನಡೆಯುತ್ತಲೇ ಬಂದಿದೆ. ಇದು ಸಮರ್ಥರಿಂದ ಸಾಧಿತವಾದಾಗ ಮೂಲಕೃತಿಯ ಭಾವ ಮತ್ತು ಭಾಷೆಗಳು ಮತ್ತೊಮ್ಮೆ ಬೇರೆ ಬೇರೆ ಹದಗಳನ್ನು ಕಂಡುಕೊಳ್ಳುವುದರಿಂದ, ಮತ್ತೊಂದು ಹೊಸ ಕೃತಿಯೇ ಎನ್ನುವಂತೆ ಭಾಷಾಂತರಕೃತಿ ಪಡಿಮೂಡುತ್ತದೆ. "Translation has served as a writing school for many recognized writers. Translators, including the early modern European translators of the *Bible,* in the course of their work have shaped the very languages into which they have translated. They have acted as bridges for conveying knowledge and ideas between cultures and civilizations"[೩]. ಎಂಬ ಹೇಳಿಕೆಯನ್ನು ಇಲ್ಲಿ ನೆನೆಯಬಹುದು.

ಅನುವಾದಕ ಮೂಲಕೃತಿಯ ಆಶಯವನ್ನು ತಾನು ಅನುವಾದಿಸಲಿರುವ ಭಾಷೆಯಲ್ಲಿ ಯಥಾವತ್ತಾಗಿ ತಂದಾಗ ಮಾತ್ರ ಅದಕ್ಕೊಂದು ಅರ್ಥ ಬರುತ್ತದೆ. ಅದರಂತೆ ವಚನಸಾಹಿತ್ಯವನ್ನು ಇಂಗ್ಲಿಷ್‌ಗೆ ಅನುವಾದಿಸುವಲ್ಲಿ ಅನುವಾದಕ ಎದುರಿಸುವ ತೊಂದರೆಯ ಬಗೆಗೆ ಬರೆಯುತ್ತ ಎ.ಕೆ.ರಾಮಾನುಜನರು: "it is always difficult to translate Vachana literature into foreign language.Since many a technical or doctrinal terms are used in the context of spiritual experiences of the writers who were essentially mystics"[೪] ಎಂದಿದ್ದಾರೆ. ಇದು ಅನುವಾದದ ಜವಾಬ್ದಾರಿಯನ್ನು ಎತ್ತಿ ತೋರುತ್ತದೆ. ಅನುಭಾವಸಾಹಿತ್ಯ ಅನುವಾದಿಸಬೇಕಾದರೆ ಶರಣರ ವಚನಗಳ ಭಾವ ಅರಿಯಬಲ್ಲ ಅನುಭಾವಿಯಿಂದ ಮಾತ್ರ ಸಾಧ್ಯ. ಸಾಹಿತ್ಯಕೃತಿಯ ಅನುವಾದಕ್ಕಿಂತ ಅನುಭಾವ/ ವಚನ ಸಾಹಿತ್ಯದ ಅನುವಾದ ಜವಾಬ್ದಾರಿ ಇನ್ನೂ ಹೆಚ್ಚಿನದು. ಈ ಬಗೆಯ ಅನುವಾದದ ಅವಶ್ಯಕತೆಯ ಬಗ್ಗೆ ವಿದ್ವಾಂಸರೊಬ್ಬರ ಅಭಿಪ್ರಾಯ ಹೀಗಿದೆ. "We want to experience works of literature written in languages we do not know, and therefore we want translated or transferred into the languages we do know. Thus there is a universal need for translation, especially in the kind of world we live in today, a world where we are chaotically implicated in the affairs of others speaking other languages. Even more urgent and legitimate is their role in multilingualism nations such as India, where the divisive impact of multilingualism needs to be systematically and constantly undermined by demonstrating the underlying metalinguistic unity in terms of content; themes and worldviews. Multilinguism opens up a floodgate of translations and trancreations"[೫]. ಅನುವಾದಕ ತಾನು ಮಾಡುತ್ತಿರುವ ಅನುವಾದ ಯಾವ ಬಗೆಯ ಓದುಗರಿಗಾಗಿ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ತನ್ನ ಅನುವಾದ ವಿದ್ವಾಂಸರಿಗಾಗಿ, ವಿದ್ಯಾರ್ಥಿಗಳಿಗಾಗಿ, ಸಾಮಾನ್ಯ ಓದುಗನಿಗಾಗಿ, ಕನ್ನಡ ಬಲ್ಲ ಕನ್ನಡಿಗರಿಗೋ ಇಲ್ಲವೇ ಕನ್ನಡ ಬಾರದ ಇಂಗ್ಲಿಷ್ ಬಲ್ಲ ಕನ್ನಡೇತರರಿಗೋ ಎನ್ನುವುದನ್ನು ಗಮನದಲ್ಲಿಡಬೇಕಾಗುತ್ತದೆ. ಅನುವಾದಕ ತನಗೆ ತೃಪ್ತಿಕೊಟ್ಟ ಮೂಲ ಪಠ್ಯ ಓದುಗನಿಗೂ ತೃಪ್ತಿಕೊಡಬೇಕೆಂಬ ಆಶಯ ಹೊಂದಿರುತ್ತಾನೆ. ಅಂತೆಯೇ ಅನುವಾದಕನಿಂದ ಓದುಗ ಹೀಗೆ ನಿರೀಕ್ಷಿಸುತ್ತಾನೆ. "this must be the hope of any translator : to make the reader forget he/she is reading a translation; to evoke admiration and gratitude not for the translation, but for the translated work"[೬]. ಮೂಲ ಲೇಖಕನ ಅಂತರಂಗ ಹೊಕ್ಕು ಅದನ್ನು ಯಥಾವತ್ತಾಗಿ ಮತ್ತೊಂದು ಭಾಷೆಯಲ್ಲಿ ಕೊಡಲು ಶಕ್ತಿ ಇದ್ದವರು ಮಾತ್ರ ಕೈಗೊಳ್ಳಬೇಕಾದ ಕಾರ್ಯವಿದು. ವಚನ ಸಾಹಿತ್ಯದ ಅನುವಾದಗಳನ್ನು ಗುರುತಿಸುವಾಗ ಈ ಕೃತಿಯನ್ನು

ಬೇರೆ ಭಾಷೆಗೆ ಕೊಂಡೊಯ್ಯುವುದರ ಜೊತೆಗೆ ಆ ಭಾಷೆಯ ಓದುಗನನ್ನೂ ಮೂಲ ವಚನಗಳ ಸಮೀಪ ತರಬೇಕಾಗುತ್ತದೆ.

ಪ್ರಸ್ತುತ ಈ ಎಲ್ಲ ಹಿನ್ನೆಲೆಯಲ್ಲಿ ವಚನಸಾಹಿತ್ಯದ ಇಂಗ್ಲಿಷ್ ಅನುವಾದದ ಅಧ್ಯಯನಕ್ಕೆ ತೊಡಗಲಾಗಿದೆ. ವಚನಸಾಹಿತ್ಯದ ಎಲ್ಲ ಶಿವಶರಣರ ಮತ್ತು ಶಿವಶರಣೆಯರ, ಅದರಲ್ಲೂ ಪ್ರಮುಖರಾದ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಸಿದ್ದರಾಮ, ಚನ್ನಬಸವಣ್ಣ ಇವರ ಸಮಗ್ರ ಅನುವಾದಿತ ವಚನಗಳನ್ನು ಅಧ್ಯಯನಕ್ಕಾಗಿ ಆರಿಸಿಕೊಳ್ಳುವ ವಿಚಾರವಿತ್ತು. ಇದುವರೆಗೆ ೧೨,೦೦೦ಕ್ಕಿಂತ ಹೆಚ್ಚು ಅನುವಾದಿತ ವಚನಗಳು ನಮಗೆ ದೊರಕಿವೆ. ಈ ಗಾತ್ರ ಬಾಹುಳ್ಯವನ್ನು ಗಮನಿಸಿ ನಮ್ಮ ಅಧ್ಯಯನವನ್ನು ಬಸವಣ್ಣನವರ ವಚನಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಅವನು ಈ ಚಳುವಳಿಯ ನಾಯಕ ವ್ಯಕ್ತಿಯಾಗಿರುವುದರಿಂದ ಹೀಗೆ ಸೀಮಿತಗೊಳಿಸಿಕೊಂಡುದು ಅರ್ಥಪೂರ್ಣವಾಗಿದೆ. ೧೯೧೫ ರಿಂದ ೨೦೦೯ರವರೆಗೆ ಬಸವಣ್ಣನವರ ವಚನಗಳ ಇಂಗ್ಲಿಷ್ ಅನುವಾದದ ೪೨ ಕೃತಿಗಳು ಹೊರಬಂದಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಅದರೆ ಟಿ.ಎಚ್.ಎಮ್.ಸದಾಶಿವಯ್ಯ ಅವರ *The Gleanings into the Sayings of Basaveshwara* ಹೊರತುಪಡಿಸಿ ಉಳಿದ ಕೃತಿಗಳು ಅಧ್ಯಯನದಲ್ಲಿ ನನ್ನ ಕೈಗೆ ಬಂದಿವೆ. ಇಲ್ಲಿ ಆ ಎಲ್ಲ ಕೃತಿಗಳ ಸಂಖ್ಯಾತ್ಮಕ ವಿವೇಚನೆ ಮತ್ತು ಮೌಲ್ಯಮಾಪನ ಮಾಡುವ ಗುರಿ ಹೊಂದಲಾಗಿದೆ. ವಚನಸಾಹಿತ್ಯದ ಅನುವಾದದ ಇತಿಹಾಸ ಮತ್ತು ಅನುವಾದದ ವಿಧಾನ ಹಾಗೂ ತಾತ್ವಿಕತೆಯ ಹಿನ್ನೆಲೆಯಲ್ಲಿ ಇದನ್ನು ಮಾಡುವುದು ನಮ್ಮ ಪ್ರಮುಖ ಉದ್ದೇಶವಾಗಿದೆ.

ನಮ್ಮ ಅಧ್ಯಯನಕ್ಕೆ ಬೇಕಾದ ಬಸವಣ್ಣನವರ ವಚನಗಳಿಗಾಗಿ ಎಂ.ಎಂ.ಕಲಬುರ್ಗಿಯವರು ಸಂಪಾದಿಸಿದ ವಚನ ಸಂಪುಟ–೧ ಪ್ರಥಮ ಅವೃತ್ತಿಯನ್ನು ಉಪಯೋಗಿಸಿಕೊಂಡಿದ್ದೇನೆ. ಈ ಅಧ್ಯಯನದ ಕಾಲವ್ಯಾಪ್ತಿಯನ್ನು ೧೯೧೫ರ ಇ.ಪಿ.ರೈಸರ ಅನುವಾದದಿಂದ ಮೊದಲ್ಗೊಂಡು ತೀರ ಇತ್ತೀಚಿನ ಎಂದರೆ ೨೦೦೯ರ ವೆಂಕಟರೆಡ್ಡಿ ದೇಸಾಯಿ ವರೆಗೆ ಸುಮಾರು ಒಂದು ಶತಮಾನದ ಅವಧಿಯಲ್ಲಿ ಅನುವಾದಗೊಂಡ ಬಸವಣ್ಣನವರ ವಚನಗಳಿಗೆ ಸೀಮಿತಗೊಳಿಸಿಕೊಂಡಿದ್ದೇನೆ. ಇದು ಪ್ರಸ್ತುತ ಅಧ್ಯಯನದ ಕಾಲವ್ಯಾಪ್ತಿಯಾಗಿದೆ.

ಈವರೆಗೆ ಕನ್ನಡದಲ್ಲಿ ವಚನಗಳನ್ನು ಕುರಿತು ಅಸಂಖ್ಯಾತ ಲೇಖನಗಳೂ ಹಲವಾರು ಗ್ರಂಥಗಳೂ ರಚಿತವಾಗಿವೆ. ಬಸವಣ್ಣನವರ ವಚನಗಳನ್ನು ಕುರಿತು ನೂರಾರು ಕೃತಿಗಳು ಹೊರಬಂದಿವೆ. ಆದರೆ ಇಂಗ್ಲಿಷ್‌ನಲ್ಲಿ ಎಸ್.ಸಿ.ನಂದಿಮಠ, ಎಸ್.ಎಮ್.ಅಂಗಡಿ, ಕೆ.ಈಶ್ವರನ್, ಶೌಟನ್, ಬ್ಲೇಕ್, ಶ್ರೀ ಕುಮಾರ ಸ್ವಾಮೀಜಿ ಮುಂತಾದವರು ಬರೆದ ಕೃತಿಗಳಲ್ಲಿ ಸಾಂದರ್ಭಿಕವಾಗಿ ವಚನಗಳನ್ನು ಉದಾಹರಿಸಲಾಗಿದೆ. ಕನ್ನಡದಲ್ಲಿ ಹಳಕಟ್ಟಿ, ತಿಪ್ಪೇರುದ್ರಸ್ವಾಮಿ, ಎಲ್.ಬಸವರಾಜು ಅವರು ವಚನಗಳಿಗೆ ತುಂಬ ಸರಳವಾದ ಅರ್ಥ ವಿವರಣೆ ನೀಡಿದ್ದಾರೆ. ಆದರೆ ಹೀಗೆ ಇಂಗ್ಲಿಷ್‌ನಲ್ಲಿ ಅನುವಾದಗೊಂಡ ವಚನಗಳಿಗೂ ಸುಲಭ ಗ್ರಾಹ್ಯವಾಗುವಂತೆ ಅರ್ಥ ನೀಡಿದವರು ವಿರಳ.

ಆರು ಅಧ್ಯಾಯಗಳ ಹರವನ್ನು ಹೊಂದಿದ ಈ ಪ್ರಬಂಧದ ಎರಡನೆಯ ಅಧ್ಯಾಯದಲ್ಲಿ, ವಚನಸಾಹಿತ್ಯದ ಅನುವಾದದ ಇತಿಹಾಸವನ್ನು ನೀಡಲಾಗಿದೆ. ಇಲ್ಲಿ ರೆ.ವರ್ಥನ ಬಸವ ಪುರಾಣ ಮತ್ತು ವಿದೇಶಿ ವಿದ್ವಾಂಸರು ಕೈಗೊಂಡ ಕೆಲಸ ಕಾರ್ಯಗಳನ್ನು ಹೇಳುತ್ತಾ, ೧೯೧೫ ರಿಂದ ಇಲ್ಲಿಯ ವರೆಗೆ

ಪ್ರಕಟವಾದ ಕೃತಿಗಳು, ಅವುಗಳ ಪ್ರಕಾಶಕರು, ಅನುವಾದಗೊಂಡ ವಚನಗಳ ಸಂಖ್ಯೆಗಳನ್ನು ನಮೂದಿಸಲಾಗಿದೆ. ಬಸವಣ್ಣನವರ ವಚನಗಳಲ್ಲದೇ ಇಲ್ಲಿಯ ವರೆಗೆ ಪ್ರಕಟವಾದ ಅಲ್ಲಮಪ್ರಭು, ಅಕ್ಕ ಮಹಾದೇವಿ, ಸಿದ್ಧರಾಮ, ಚನ್ನಬಸವಣ್ಣ, ದಾಸಿಮಯ್ಯನ ವಚನಗಳ ಅನುವಾದದ ಸ್ಥೂಲಪರಿಚಯವನ್ನು ಕೊಡಲಾಗಿದೆ. ಕೆಲವು ಅನುವಾದಗಳು ನಿಮಿತ್ಯ ಮಾತ್ರಕ್ಕೆ ಹೊರಬಂದರೂ, ಅವು ಅನುವಾದಸಾಹಿತ್ಯದಲ್ಲಿ ತಮ್ಮದೇ ಆದ ಗಮನಾರ್ಹಸ್ಥಾನ ಪಡೆದಿವೆ.

ಬಸವಣ್ಣನವರ–೪೨, ಅಕ್ಕ ಮಹಾದೇವಿಯ–೨೦, ಅಲ್ಲಮಪ್ರಭುವಿನ–೧೧, ಸಿದ್ಧರಾಮ, ಚನ್ನಬಸವಣ್ಣನ, ದಾಸಿಮಯ್ಯನ ತಲಾ ೭ ಇಂಗ್ಲಿಷ್ ಅನುವಾದ ಕೃತಿಗಳ ಮತ್ತು ಇನ್ನುಳಿದ ಎಲ್ಲ ಶಿವಶರಣ/ಶಿವಶರಣೆಯರ ಎಲ್ಲ ಇಂಗ್ಲಿಷ್ ಅನುವಾದ ಕೃತಿಗಳ ಬಗೆಗೂ ವಿವರಣೆ ನೀಡಲಾಗಿದೆ.

ಅಧ್ಯಾಯ ಮೂರರಲ್ಲಿ ಬಸವಣ್ಣನವರ ಅನುವಾದಿತ ಇಂಗ್ಲಿಷ್ ವಚನಗಳನ್ನಷ್ಟೇ ಅನುಲಕ್ಷಿಸಿ, ಸಂಖ್ಯಾತ್ಮಕ ವಿವೇಚನೆಯನ್ನು ಕೈಗೊಳ್ಳಲಾಗಿದೆ. ಈ ವಚನಗಳ ಸಮಗ್ರ ಅನುವಾದ ಪಟ್ಟಿಯನ್ನು ಸಿದ್ಧಪಡಿಸಿ, ಯಾರು ಎಷ್ಟು ವಚನಗಳನ್ನು ಅನುವಾದಿಸಿದರು, ಯಾವ ವಚನ ಹೆಚ್ಚು ಅನುವಾದಗೊಂಡಿದೆ, ಯಾವ ವಚನ ಕಡಿಮೆ ಅನುವಾದಗೊಂಡಿದೆ ಎಂಬ ವಿವೇಚನೆ ಇಲ್ಲಿ ಜರಗಿದೆ. ಅದಕ್ಕೆ ಒದಗಿದ ಕಾರಣಗಳನ್ನೂ ಸೂಚಿಸುತ್ತ ಅವರಿಗೆ ಎದುರಾದ ತೊಂದರೆಗಳಿಗೆ ಇಲ್ಲಿ ಕಾರಣ ಕಂಡುಕೊಳ್ಳಲಾಗಿದೆ. ಅದರೊಂದಿಗೆ ಚಾರಿತ್ರಿಕ ಭೌಗೋಲಿಕ, ಕಾರಣಗಳನ್ನೂ ವಿಸ್ತೃತವಾಗಿ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಅನುವಾದದ ವಿಧಾನಗಳ ತಾಂತ್ರಿಕ ವಿವೇಚನೆಗೆ ಆಸ್ಪದ ನೀಡಲಾಗಿದೆ. ಅನುವಾದ ಸಂದರ್ಭದಲ್ಲಿ ವಿದ್ವಾಂಸರ ಸಾಮರ್ಥ್ಯ, ಒಲವು ಕಾರಣವಾಗಿ ಅನುವಾದ ಕಾರ್ಯದಲ್ಲಿ ವಿಭಿನ್ನ ವಿಧಾನಗಳು ತಲೆದೋರುತ್ತವೆ. ಈ ಕಾರ್ಯಕ್ಕೆ ಕೈ ಹಾಕುವ ಉದ್ದೇಶದ ಹಿಂದೆ ಕೆಲವು ತತ್ಕಾಲೀನ ಒತ್ತಡಗಳಿರಬಹುದು. ಕೆಲವು ಸಾಮಾಜಿಕ ಕಾರಣಗಳಿರಬಹುದು. ಅನುವಾದದ ಬಗೆಗಳು ಭಿನ್ನವಾಗಿರಬಹುದು. ಇಂಥ ವಿಧಾನಗಳನ್ನು ಗುರುತಿಸಿ, ಅವುಗಳ ಸ್ವರೂಪ ಲಕ್ಷಣಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಬಸವಣ್ಣನವರ ಎಲ್ಲ ವಚನಗಳನ್ನು ಕೈಬಿಟ್ಟು ನಮ್ಮ ಅಧ್ಯಯನದ ಉದ್ದೇಶಕ್ಕೆ ಒಳಪಟ್ಟಂತೆ ಅನುವಾದಗೊಂಡ ಪ್ರಾತಿನಿಧಿಕ ಮೂವತ್ತು ವಚನಗಳನ್ನು ಆಯ್ದುಕೊಂಡು, ಅವುಗಳ ಅನುವಾದ ಕಾರ್ಯದ ಮೌಲ್ಯಮಾಪನ ಕೊಡಲಾಗಿದೆ. ಇಲ್ಲಿನ ವಚನಗಳಲ್ಲಿ ಬಳಕೆಗೊಂಡ ಕೆಲವು ಕನ್ನಡ ಶಬ್ದಗಳಿಗೆ ಇಂಗ್ಲಿಷ್ ಅನುವಾದದಲ್ಲಿ ಸಮರ್ಪಕ ಶಬ್ದಗಳು ದೊರೆತಿಲ್ಲ. ಅಂಥ ಸಂದರ್ಭಗಳಲ್ಲಿ ಸಂದರ್ಭೋಚಿತವಾದ ಅರ್ಥಪೂರ್ಣ ಶಬ್ದಗಳನ್ನು ಬಳಸಲು ಪ್ರಯತ್ನಿಸಲಾಗಿದೆ. ಇನ್ನು ಕೆಲವೆಡೆ ಮೂಲ ಅರ್ಥವನ್ನು ಸಂಪೂರ್ಣವಾಗಿ ಕೈಬಿಟ್ಟ ಉದಾಹರಣೆಗಳನ್ನು ಗುರುತಿಸಲಾಗಿದೆ.

ಅನುವಾದದ ತೌಲನಿಕ ಅಧ್ಯಯನದಿಂದ ಯಾವ ಅನುವಾದ ಹೆಚ್ಚು ಸಮಂಜಸ ಮತ್ತು ಸಮರ್ಪಕ ಎನ್ನುವುದರ ಜೊತೆ ಜೊತೆಗೆ ಅದು ಮೂಲಕ್ಕೆ ಎಷ್ಟು ನಿಷ್ಠವಾಗಿದೆ ಮತ್ತು ಮೂಲಕ್ಕೆ ಭಿನ್ನವಾಗಿದೆ ಎಂಬುದರ ಮೌಲ್ಯಮಾಪನ ಈ ಅಧ್ಯಾಯದಲ್ಲಿದೆ. ಬಸವಣ್ಣನವರ ವಚನಗಳ ಇಂಗ್ಲಿಷ್ ಅನುವಾದದ ಒಟ್ಟು ನೋಟ ಆರನೆಯ ಅಧ್ಯಾಯದ ಸಮಾರೋಪದಲ್ಲಿದೆ. ಒಟ್ಟಿನಲ್ಲಿ ಬಸವಣ್ಣನವರ ವಚನಗಳ ಇಂಗ್ಲಿಷ್ ಅನುವಾದದ ಚರಿತ್ರೆ, ರೀತಿ, ವಿಧಾನ, ವಿಶೇಷತೆಗಳನ್ನು ಗುರುತಿಸುವ ಪ್ರಯತ್ನವನ್ನಿಲ್ಲಿ

ಮಾಡಲಾಗಿದೆ. ಈವರೆಗಿನ ವಚನಗಳ ಅಧ್ಯಯನ ಮತ್ತು ಅನುವಾದ ಕಾರ್ಯಗಳ ಮುಂದುವರಿಕೆಯಾಗಿ ಇದನ್ನು ರೂಪಿಸಲು ಯತ್ನಿಸಲಾಗಿದೆ.

**ಗ್ರಂಥ ಋಣ**


೧. ಬಸವನಾಳ ಶಿ.ಶಿ, ಬಸವಣ್ಣನವರ ಷಟಸ್ಥಲದ ವಚನಗಳು, ೧೯೯೦, 'ಪ್ರಸ್ತಾವನೆ' ಪುಟ.೧

೨. ಎಂ.ಚಿದಾನಂದಮೂರ್ತಿ, 'ವಚನಸಾಹಿತ್ಯ', ೧೯೭೫, ಪುಟ.

೩. From Internet

೪. Ramanujan A.K., `Speaking of Siva',

೫. Raphaveudha Rao K., `Translation and Fate of Bilingjalion'


❑❑❑

ಕನ್ನಡದ ಅನುಭಾವ ಸಾಹಿತ್ಯವಾದ ವಚನಗಳು ಬೇರೆ ಭಾಷೆಗಳಿಗೆ ತರ್ಜುಮೆಯಾಗಲು ಪ್ರಾರಂಭಗೊಂಡಿದ್ದು ಕಳೆದ ಶತಮಾನದ ಎರಡನೆಯ ದಶಕದಲ್ಲಿ. ಮನೆ ಮಠಗಳಲ್ಲಿ ಪೂಜೆಗೊಂಡು, ಅರಿಷಿಣ ಕುಂಕುಮದ ಲೇಪನದಿಂದ ಅಜ್ಞಾತವಾಸದಲ್ಲಿದ್ದ ಈ ಸಾಹಿತ್ಯ ಮೊದಮೊದಲು ಕೆಲವು ಆಸಕ್ತರಿಂದ ಶೋಧಿಸಲ್ಪಟ್ಟು, ಅಲ್ಲಲ್ಲಿ ಅಪೂರ್ಣವಾಗಿ ಪ್ರಕಟಗೊಂಡಿದಿತು, ನಂತರ ೧೯೦೮ರಲ್ಲಿ, ವಚನಗಳ ಹಸ್ತಪ್ರತಿ ಗಮನಿಸುವ ಮೂಲಕ ಫ.ಗು.ಹಳಕಟ್ಟಿಯವರು ಇದರ ಪ್ರಕಟನ ಕಾರ್ಯಕ್ಕೆ ನಿರ್ದಿಷ್ಟ ಚಾಲನೆ ಒದಗಿಸಿ ವಚನ ಪಿತಾಮಹರೆಂಬ ಕೀರ್ತಿಗೆ ಪಾತ್ರರಾದರು.

ಅನೇಕ ವಿದೇಶಿಯರು ಧರ್ಮಪ್ರಚಾರಕರಾಗಿ, ಆಡಳಿತಗಾರರಾಗಿ ನಮ್ಮ ನಾಡಿಗೆ ಬಂದು ಕನ್ನಡ ನಾಡು ನುಡಿಗೆ ತಮ್ಮ ಋಣಸಂದಾಯ ಮಾಡಿದ್ದಾರೆ. ಆಧುನಿಕ ಕನ್ನಡಸಾಹಿತ್ಯದ ಉದಯಕಾಲದಲ್ಲಿ ಅವರು ತೋರಿದ ಆಸಕ್ತಿ ಮುಂದಿನ ವಿದ್ವಾಂಸರಿಗೆ ದಾರಿದೀಪವಾಗಿದೆ. ದಾಸಸಾಹಿತ್ಯ ಪ್ರಕಟಿಸಿದ ಹರ್ಮನ್ ಮೋಗ್ಲಿಂಗ್, ಕನ್ನಡ ವ್ಯಾಕರಣ ಬೋಧಿನಿ ರಚಿಸಿದ ಫ್ರೆಡ್ರಿಕ್ ಝಿಗ್ಲರ್, ಶಾಸನ ಮತ್ತು ಲಾವಣಿ ಸಾಹಿತ್ಯದಲ್ಲಿ ಸೇವೆಗೈದ ಜೆ.ಎಫ್.ಫ್ಲೀಟ, ಕನ್ನಡ–ಇಂಗ್ಲಿಷ ನಿಘಂಟು ರೂಪಿಸಿದ ಫರ್ಡಿನಾಂಡ ಕಿಟೆಲ್ ಮೊದಲಾದವರು ಪ್ರಾತಃಸ್ಮರಣೀಯರು. ಇವರೊಂದಿಗೆ ಕರ್ನಲ್ ಮೆಕೆಂಝಿ, ವಾಲ್ಟರ್ ಎಲಿಯಟ್, ಬಿ.ಎಲ್.ರೈಸ್ ಇತ್ಯಾದಿ ವಿದ್ವಾಂಸರ ಕೊಡುಗೆಗಳನ್ನು ಮರೆಯುವಂತಿಲ್ಲ. ಇವರೆಲ್ಲರ ಶಾಸನ ಹಸ್ತಪ್ರತಿ, ನಿಘಂಟು ಕೈಫಿಯತ್ತು, ನಾಣ್ಯ, ಲಾವಣಿ, ಗಾದೆ, ಹಾಡು, ಗ್ರಂಥಸಂಪಾದನೆ, ವ್ಯಾಕರಣ ಇತ್ಯಾದಿ ಕ್ಷೇತ್ರಗಳಲ್ಲಿ ಉಲ್ಲೇಖನೀಯ ಕೆಲಸ ಮಾಡಿದ್ದಾರೆ. ಇದರಿಂದಾಗಿ ನಮ್ಮ ಸಾಹಿತ್ಯ, ಇತಿಹಾಸ, ಸಂಸ್ಕೃತಿಗಳಿಗೆ ವಿಪುಲ ಆಕರಸಾಮಗ್ರಿ ದೊರೆಯಿತು.

ಜಿ.ವೈಗಲ್ ಮತ್ತು ಜಿ.ಎ.ವರ್ಥ ಅವರು *Bibliotheca Carnatica*ದ ಮೂಲಕ ಜೈಮಿನಿ ಭಾರತ (೧೮೪೮) ತೊರವೆ ರಾಮಾಯಣ (೧೮೪೯) ದಾಸರ ಪದಗಳು (೧೮೫೦) ಹರಿಭಕ್ತಿಸಾರ, ಕುಮಾರವ್ಯಾಸ ಭಾರತ, ಬಸವ ಪುರಾಣ, ಮತ್ತು ಚೆನ್ನಬಸವ ಪುರಾಣ (೧೮೫೮) ಮೊದಲಾದವುಗಳನ್ನು ಪ್ರಕಟಿಸಿದರು. ಈ ಮೂಲಕ ಕಾವ್ಯಗಳ ಸಂಪಾದನೆಗೆ ಒಂದು ಮಾದರಿಯನ್ನು ಸಿದ್ಧಪಡಿಸಿದರು.

ಆದರೆ ಇವರಾರೂ ವಚನಸಾಹಿತ್ಯದ ಕಡೆಗೆ ಹೊರಳಿ ನೋಡದೇ ಇರುವುದು ವಿಸ್ಮಯ ಹುಟ್ಟಿಸುತ್ತದೆ. ಹೀಗಿರುವಾಗ ವಚನಗಳನ್ನು ಮೊಟ್ಟ ಮೊದಲಿಗೆ ಇಂಗ್ಲಿಷ್ ಭಾಷೆಗೆ ಅನುವಾದಿಸಿದ ಕೀರ್ತಿ ಇ.ಪಿ.ರೈಸ್ ಅವರಿಗೆ ಸಲ್ಲುತ್ತದೆ. ೧೯೧೫ರಲ್ಲಿ ಪ್ರಕಟವಾದ *History of Kanarese Literature*ನಲ್ಲಿ ಬಸವಣ್ಣನ ಮೂರು, ಅಕ್ಕ ಮಹಾದೇವಿ, ಉರಿಲಿಂಗ ಪೆದ್ದಿ ಮತ್ತು ಸ್ವತಂತ್ರ ಸಿದ್ಧಲಿಂಗೇಶ್ವರರ ತಲಾ ಒಂದೊಂದು ವಚನಗಳನ್ನು ಇಂಗ್ಲಿಷಿಗೆ ಅನುವಾದಿಸಿ, ವಚನಸಾಹಿತ್ಯದ ಬಗೆಗೆ ಮೆಚ್ಚುಗೆಯ ಮಾತುಗಳನ್ನಾಡುತ್ತಾರೆ. ೧೯೨೧ರಲ್ಲಿ ಪ್ರಕಟಗೊಂಡ ಇದೇ ಕೃತಿಯ ಎರಡನೆಯ ಮುದ್ರಣದಲ್ಲಿ ಲಿಂಗಾಯತ ಸಾಹಿತ್ಯದ ಬಗೆಗೆ ತುಸು ವಿಸ್ತರಿಸಿ ಬರೆದುದಾಗಿ ರೈಸ್ ಹೇಳಿದ್ದಾರೆ. ಅಲ್ಲಿ ಅವರು 'ಉಳ್ಳವರು ಶಿವಾಲಯ ಮಾಡುವರು' ವಚನವನ್ನು ಕೆಳಕಂಡಂತೆ ತರ್ಜುಮೆಗೊಳಿಸಿದ್ದಾರೆ :

Those who have means will not devote them to the building of a temple to God (Siva). Then I though poor man, will build Thee one, O Lord, My legs shall be the pillars, my body the shrine, my head the golden finial Hearken, O Kudalsangama deva! The fixed temples of stone will come to an end; but this movable temple of the spirit will never perish"[೧].

ಮೂಲತಃ "ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡುವೆನು? ಬಡವನಯ್ಯಾ" ಎನ್ನುವಲ್ಲಿ ಹಣವಂತರು ದೇವಾಲಯ ಕಟ್ಟಿಸುವ ಆಡಂಬರದ ಬಗೆಗೆ ವ್ಯಂಗ್ಯ ಧ್ವನಿಯಿದೆ. ಆದರೆ ರೈಸ್ ರವರು ಈ ಧ್ವನಿಯನ್ನು ಗುರುತಿಸದೆ "Those who have means will not devote them to the building of a temple to God (Siva). Then I though poor man, will build Thee one," ಅಂದರೆ ಶ್ರೀಮಂತರು (ಉಳ್ಳವರು) ಶಿವಾಲಯ ಕಟ್ಟಲು ತೊಡಗಿಸಿಕೊಳ್ಳುವುದಿಲ್ಲ, ಆದರೆ ಬಡವನಾದ ನಾನು ನಿನಗೊಂದು ಶಿವಾಲಯ ಕಟ್ಟುತ್ತೇನೆ ಎಂಬ ಅರ್ಥ ಬರುವಂತೆ ಅನುವಾದಿಸಿದ್ದಾರೆ.ಅವರು ಕನ್ನಡ ಬಲ್ಲ ವಿದ್ವಾಂಸರ ಸಹಾಯ ಪಡೆದಾಗಲೂ ಈ ವಚನದ ಆಶಯ ಗ್ರಹಿಸುವಲ್ಲಿ ಸೋತಿದ್ದಾರೆ.

ಅನುವಾದ ದೃಷ್ಟಿಯಿಂದ ಅಲ್ಪ ಸ್ವಲ್ಪ ನ್ಯಾಯ ಒದಗಿಸಿಕೊಟ್ಟ ವಚನ 'ನರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ', ಎಂಬುದು. ಇನ್ನೊಂದು ವಚನ "ಆಡಿ ಕಾಲು ದಣಿಯವು ನೋಡಿ ಕಣ್ಣು ದಣಿಯವು"ಎಂಬುದನ್ನು "The leg does not tire of walking" ಎಂದು ಅನುವಾದಿಸಿದ್ದಾರೆ. ಇಲ್ಲಿ ಆಡಿ ಎಂಬುದಕ್ಕೆ ಪರಮಾತ್ಮನ ನಾಮ ನೆನೆದು ಕುಣಿದಾಡಿ ಎಂಬ ಅರ್ಥವಿದ್ದು, ಇಂಗ್ಲಿಷ್ ಅನುವಾದದಲ್ಲಿ ಈ ಅರ್ಥ ಗೋಚರಿಸುವುದಿಲ್ಲ. ಒಟ್ಟಾರೆ, ಇಲ್ಲಿ ಬಸವಣ್ಣನ ಮೂರೂ ವಚನಗಳನ್ನೂ ನೋಡಿದಾಗ ಒಂದು ವಚನಕ್ಕೆ ಅಲ್ಪ ಸ್ವಲ್ಪ ನ್ಯಾಯ ಒದಗಿಸಿಕೊಟ್ಟರೂ, ಉಳಿದೆರಡು ವಚನಗಳಲ್ಲಿ ಅನುವಾದ ಸಮರ್ಪಕವಾಗಿಲ್ಲವೆಂಬುದು ಮೇಲ್ನೋಟಕ್ಕೆ ಸ್ಪಷ್ಟವಾಗುತ್ತದೆ.

ವಚನಸಾಹಿತ್ಯದ ಶೋಧ, ಪರಿಷ್ಕರಣ, ಪ್ರಕಟಣ ಕಾರ್ಯಗಳಿಗೆ ಹೆಚ್ಚಿನ ವ್ಯಾಪ್ತಿ, ವೇಗ ಉಂಟಾದದ್ದು ಹಳಕಟ್ಟಿಯವರಿಂದ. ವೃತ್ತಿಯಿಂದ ವಕೀಲರಾಗಿದ್ದು, ವಚನ ಪ್ರಕಟಣ, ಪ್ರಸಾರ ಕಾರ್ಯಗಳಿಗಾಗಿ ತಮ್ಮ

ಇಡೀ ಬದುಕನ್ನೇ ಇವರು ಮುಡುಪಾಗಿಟ್ಟಿದ್ದರು. ಸಂಗ್ರಹಿಸಿದ ವಚನಗಳನ್ನು ಮೊದಲ ಸಲ ಅಚ್ಚು ಹಾಕಿಸಲು ಅವರು ಪಟ್ಟ ಶ್ರಮ ಅಷ್ಟಿಷ್ಟಲ್ಲ. ಅವರೇ ಹೇಳಿಕೊಂಡಿರುವಂತೆ:

"ಸುಂದರವಾಗಿ ಅಚ್ಚು ಹಾಕಿಸಬೇಕೆಂದು ಮಂಗಳೂರು ಬಾಸೆಲ್ ಮಿಶನ್ ಪ್ರೆಸ್ಸಿಗೆ ಕಳಿಸಿಕೊಟ್ಟಿದ್ದಲ್ಲದೆ ಅವರು ತಿಳಿಸಿದಂತೆ ಈ ಕಾರ್ಯಕ್ಕೋಸ್ಕರ ೫೦೦ ರೂಪಾಯಿಗಳನ್ನು ಸಹ ಮುಂಗಡವಾಗಿ ಅವರಿಗೆ ಕಳುಹಿಸಿಕೊಟ್ಟೆನು. ಆದರೆ ಆಶ್ಚರ್ಯದ ಸಂಗತಿಯೇನೆಂದರೆ ಮಿಶನ್ ಪ್ರೆಸ್ಸಿನವರು ಪರಧರ್ಮದವರ ಗ್ರಂಥಗಳನ್ನು ನಾವು ಅಚ್ಚು ಹಾಕುವುದಿಲ್ಲ ಮತ್ತು ನಿಮ್ಮ ಗ್ರಂಥದಲ್ಲಿ ಪರಮಾತ್ಮನ ಸಂಬಂಧವಾಗಿ ಇರುವ ವಿಚಾರಗಳನ್ನು ಪ್ರಕಾಶಪಡಿಸಲು ನಾವು ಇಷ್ಟಪಡುವುದಿಲ್ಲ. ಅವು ನಮ್ಮ ಕ್ರಿಶ್ಚನ್ ಧರ್ಮತತ್ವಗಳನ್ನು ಹೋಲುತ್ತವೆ. ಇಂಥ ಧಾರ್ಮಿಕ ಗ್ರಂಥಗಳನ್ನು ಅಚ್ಚು ಹಾಕುವುದರಿಂದ ನಮ್ಮ ಮಿಶನ್ನಿನ ಉದ್ದೇಶಕ್ಕೆ ಭಂಗ ಬರುತ್ತದೆ, ಎಂಬ ಕಾರಣವನ್ನು ತೋರಿಸಿ ನಾನು ಕಳಿಸಿದ ಹಸ್ತಲಿಖಿತ ಗ್ರಂಥವನ್ನು ೫೦೦ರೂ. ಮುಂಗಡ ಹಣವನ್ನು ನನಗೆ ತಿರುಗಿ ಕಳಿಸಿದರು"[೨]. ಇಂಥಹ ಪರಿಸ್ಥಿತಿಯಲ್ಲಿ ಹಳಕಟ್ಟಿಯವರೇ ಹಿತಚಿಂತಕ ಮುದ್ರಣ ಯಂತ್ರ ಸ್ಥಾಪಿಸಿ ೧೯೨೫ರಲ್ಲಿ ಈ ಕಾರ್ಯವನ್ನು ಯಶಸ್ವಿಯಾಗಿ ಮುನ್ನಡೆಸಿದರು. ಹಳಕಟ್ಟಿಯವರು ವಚನಸಾಹಿತ್ಯದ ಶೋಧ, ಪರಿಷ್ಕರಣ, ಕ್ರೋಢೀಕರಣ ಕಾರ್ಯಗಳೊಂದಿಗೆ ವಚನಗಳ ಅನುವಾದಕ್ಕೆ ಮುಂದಾದರು. ಈ ಅನುವಾದಕ್ಕೆ ಪ್ರೇರಣೆ ವಿದೇಶಿ ವಿದ್ವಾಂಸ ಜೆ.ಎಸ್.ಫರಕ್ವಾರ್. ಹಳಕಟ್ಟಿಯವರು ೧೯೧೫ ರಿಂದ ಅನುವಾದ ಪ್ರಕ್ರಿಯೆ ಪ್ರಾರಂಭಿಸಿ ೧೯೧೬ರಲ್ಲಿ ಪೂರ್ಣಗೊಳಿಸಿದರು. ಅವರು ೧೩೯ ವಚನಗಳನ್ನು ಅನುವಾದಿಸಿ *Vacanas Attributed to Basava* ಎಂಬ ಶೀರ್ಷಿಕೆಯೊಂದಿಗೆ ಅಂದಿನ ಪ್ರಮುಖ ಪತ್ರಿಕೆಯಾದ *The Indian Antiquary* Vol, LI (೧೯೨೨) ರಲ್ಲಿ ಪ್ರಕಟಗೊಳಿಸಿದರು.

ಈ ಅನುವಾದಗಳನ್ನು ೨೦೦೩ರಲ್ಲಿ ಪತ್ರಿಕೆಯಿಂದ ಪುಸ್ತಕರೂಪಕ್ಕೆ ತಂದ ಡಾ. ಯರವಿನತೆಲಿಮಠ ಅವರು "It contains the quintessence of Basava's philosophy since the vacanas selected are highly representative. No one would have thought of rendering vacanas into another language when their Kannada texts themselves were not in proper form. Hence the credit of not only unearthing vacana literature out of sand heaps of time but also seeing them clothed in a muslin of the English language goes to Dr.Halakatti"[೩] ಎಂದು ಹೇಳಿದುದು ಮನನೀಯವಾಗಿದೆ. ಷಟಸ್ಥಲ ಕಟ್ಟನ್ನು ಆಧರಿಸಿ ಆಯ್ದ ವಚನಗಳನ್ನು ಅನುವಾದಿಸಿರುವುದರಿಂದ ಇದು ಆ ಕಟ್ಟಿನ ಸಂಗ್ರಹವೆನಿಸಿದೆ. ಮೊದಲ ಹಂತವಾದ ಭಕ್ತಸ್ಥಲದಲ್ಲಿ (**Devotion**) *Seek Liberation from Wordliness, Destroy Egoism, Be Virtuous, Speak the Truth, Be Merciful, Be not Angry, Be Chaste, Be Charitable, Be Gentle, Be Humble, Keep Good Company, Be Pure in Mind, Have Faith, Worship with Pure Heart, Meditation upon the Linga* ಎಂದೂ, ಎರಡನೆಯ ಹಂತವಾದ ಮಹೇಶಸ್ಥಲದಲ್ಲಿ ***(Divine Power)*** *Be Firm,Face Difficulties, Be Fearless, There is One God, God is Universal, Sacrifice,Do not believe in*

*Astrology,Devils and Omens, Do not believe in Caste* ಎಂದೂ, ಮೂರನೆಯ ಹಂತವಾದ ಪ್ರಸಾದದಲ್ಲಿ **(Grace)** *A Work without Desiring Anything in Return, Submit Yourself to God, Do not Mortify the Body* ಎಂದೂ, ನಾಲ್ಕನೆಯ ಹಂತವಾದ ಪ್ರಾಣಲಿಂಗಿಸ್ಥಲದಲ್ಲಿ **(sSiva in the Life)** *the Nature of Prana-Linga, The Behaviour of Prana-Linga, The Prana-Linga's Realization of God* ಎಂದೂ, ಐದನೆಯ ಹಂತವಾದ ಶರಣದಲ್ಲಿ **(Self-Surrender***)* *Knowledge of God , The State of Sharana, The Environment of the Servant is Holy* ಎಂದೂ, ಆರನೆಯ ಹಂತವಾದ ಐಕ್ಯಸ್ಥಲದಲ್ಲಿ ***(Oneness)*** *A State of Final Absorption* ಎಂದೂ ನೀಡಿರುವ ಶೀರ್ಷಿಕೆಗಳು ಆರಿಸಿಕೊಂಡ ವಚನಗಳ ವಿಷಯದತ್ತ ಬೆರಳು ತೋರುತ್ತವೆ. ಆಗಿನ ಕಾಲದಲ್ಲಿ ಇಂಗ್ಲೀಷಿನಿಂದ ಕನ್ನಡಕ್ಕೆ ಆಗುತ್ತಿದ್ದ ಭಾಷಾಂತರಗಳ ಸಂಖ್ಯೆ ಹೆಚ್ಚಾಗಿದ್ದಾಗ ಹಾಗೂ ಪಶ್ಚಿಮದಿಂದ ಜ್ಞಾನದ ಹರಿವು 'ಕನ್ನಡ ಸಂಸ್ಕೃತಿ' ಮತ್ತು ಭಾಷೆಯ ಸಮೃದ್ಧಿಗೆ ಅತ್ಯವಶ್ಯಕವಾದಾಗ, ಹಳಕಟ್ಟಿಯಂಥವರಿಗೆ ಕನ್ನಡದ ವಚನಗಳನ್ನು ಇಂಗ್ಲಿಷಿಗೆ ಕೊಂಡೊಯ್ಯುವ ಚಾರಿತ್ರಿಕ ಅವಶ್ಯಕತೆ ಏನಿತ್ತು? ಈ ಪ್ರಶ್ನೆಗಳಿಗೆ ಉತ್ತರ ಎಂದರೆ ಹಳಕಟ್ಟಿಯಂತವರಲ್ಲಿ ಮೂಡಿದ್ದ 'ಪ್ರಗತಿಪರ' ಹಾಗೂ 'ಜಾತ್ಯಾತೀತ' ಮನೋಭಾವವೇ ಕಾರಣ. ಲಿಂಗಾಯತ ಸಮಾಜಕ್ಕೆ ಹಾಗೂ ವಿಶಾಲ ಕರ್ನಾಟಕಕ್ಕೆ ಹೊಸದಾದ, ಪ್ರಗತಿಪರವಾದ, ಸುಧಾರಣವಾದಿಯಾದ ಹಾಗೂ ಸಮಾನತೆಯ ಇತಿಹಾಸವನ್ನು ನಿರ್ಮಿಸುವ ಪ್ರಯತ್ನವನ್ನು ಹಳಕಟ್ಟಿಯವರಲ್ಲಿ ಕಾಣಬಹುದು. ಲಿಂಗಾಯತರ ಹಾಗೂ ಅವರ ಸಮಾಜದ ಮಹತ್ವವನ್ನು ಮತ್ತು ಯೋಗ್ಯತೆಯನ್ನು ಸಮರ್ಥಿಸುವ ಜವಾಬ್ದಾರಿಯನ್ನು ಹಳಕಟ್ಟಿಯವರು ನಿಭಾಯಿಸಿದರು...."[೪].

ಹೀಗೆ ಪ್ರಾರಂಭಗೊಂಡ ವಚನಗಳ ಅನುವಾದ ಕಾರ್ಯ ಸಣ್ಣಕತೆಗಳ ಜನಕರಾದ ಮಾಸ್ತಿ ವೆಂಕಟೇಶ ಅಯ್ಯಂಗಾರರಿಂದಲೂ ಜರುಗಿ ೧೯೩೪ರಲ್ಲಿ ಗದುಗಿನ ವೀರಶೈವ ತರುಣ ಸಂಘದ ಪ್ರಕಾಶನದಲ್ಲಿ *Sayings of Basavanna* ಎಂಬ ಕೃತಿ ಪ್ರಕಟವಾಯಿತು. ಮಾಸ್ತಿಯವರು ಈ ವಚನಗಳ ಬಗ್ಗೆ ತುಂಬ ಅರ್ಥಪೂರ್ಣವಾಗಿ ಅಭಿಪ್ರಾಯಪಡುತ್ತಾರೆ. "They constitute a record of religious experience of a kind not often met within Indian literature nor very often even in world literature. These meditations of Basavanna are therefore of great importance to all persons interested in the history of religion"[೫] ಅವರು ಬಸವಣ್ಣನ ಬಗ್ಗೆ, ೧೨ನೆಯ ಶತಮಾನದ ಚಳುವಳಿ ಹಾಗೂ ಶಿವಶರಣರ ಬಗ್ಗೆ ತಮ್ಮದೇ ಆದ ವಿಚಾರಗಳನ್ನು ಮೇಲಿನಂತೆ ಸಂಕ್ಷಿಪ್ತವಾಗಿ ಮಂಡಿಸಿದ್ದಾರೆ. ಬಳಿಕ ೧೦೧ ವಚನಗಳನ್ನು ಕನ್ನಡದಲ್ಲಿ ಕೊಟ್ಟು, ಅವುಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದ್ದಾರೆ. ಅವರು ಆಯ್ದುಕೊಂಡ ವಚನಗಳಲ್ಲಿ ಹೃದಯ ವೈಶಾಲ್ಯತೆ; ಏಕದೇವೋಪಾಸನೆ ಹಾಗೂ ಬಡವರ ಬಗೆಗಿನ ಮಮತೆ ಮುಖ್ಯವಾಗಿ ಎದ್ದು ಕಾಣುತ್ತವೆ. ಮಾಸ್ತಿಯವರು ಕೂಡಾ ಹಳಕಟ್ಟಿಯವರಂತೆ ಗದ್ಯಾತ್ಮಕವಾಗಿಯೇ ಅನುವಾದಿಸುತ್ತಾರೆ.

ಆಂಧ್ರಪ್ರದೇಶದ ಕರ್ನೂಲಿನಲ್ಲಿ ನ್ಯಾಯಾಧೀಶರಾಗಿದ್ದ ಟಿ.ಎಚ್.ಎಮ್. ಸದಾಶಿವಯ್ಯನವರು ೧೯೩೫ರಲ್ಲಿ ಬಸವೇಶ್ವರನ ವಚನಗಳಲ್ಲಿನ ೨೫ ವಚನಗಳನ್ನು ಹಕ್ಕಲ ಆಯ್ದಂತೆ ಆಯ್ದು *Gleanings into*

*the sayings of Basveshwara* ಎಂದು ಪ್ರಕಟಿಸಿರುವುದಾಗಿ ತಿಳಿದು ಬರುತ್ತದೆ. ಆದರೆ ಎಸ್.ಆರ್.ಗುಂಜಾಳರು ಅಭಿಪ್ರಾಯ ಪಡುವಂತೆ ಅವರು "ಷಟಸ್ಥಲ ಕಟ್ಟಿನಲ್ಲಿಯ ೯೫೭ ವಚನಗಳನ್ನು ಅನುವಾದಿಸಿದುದಾಗಿ ತಿಳಿದಿದೆ. ಅನುವಾದಿತ ಹಸ್ತ ಪ್ರತಿಯಲ್ಲಿನ ಸುಮಾರು ೨೫ ವಚನಗಳನ್ನು ಆಯ್ದು ಮುದ್ರಿಸಲಾಗಿದೆ"[೬]. ಈ ಪುಸ್ತಕ ಇಂದು ಲಭ್ಯವಿಲ್ಲ. ಸಮಗ್ರ ಅನುವಾದದ ಹಸ್ತಪ್ರತಿಯೂ ಲಭ್ಯವಿಲ್ಲ.

ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದ ಎನ್.ಕೆ.ಸಂಗನಾಳಮಠರು ಬಸವಣ್ಣನ ೭೨ ವಚನಗಳನ್ನು *Thoughts of Basava : A book meant to revolutionize the world of religion* ಎಂಬ ಹೆಸರಿನಲ್ಲಿ ವಚನ ಪಿತಾಮಹ ಹಳಕಟ್ಟಿಯವರ ಮುನ್ನುಡಿಯೊಂದಿಗೆ ೧೯೩೯ರಲ್ಲಿ ಪ್ರಕಟಿಸುತ್ತಾರೆ. ಮುನ್ನುಡಿಯಲ್ಲಿ ಹಳಕಟ್ಟಿಯವರು ಸಂಗನಾಳಮಠರ ಕೃತಿಯ ಬಗ್ಗೆ ಹೀಗೆ ಹೇಳುತ್ತಾರೆ:

"The oneness of the almighty Power, the importance of the ethical system of Lingayats ,the hollow nature of the so called caste system, the metaphysical principle of the Lingayats are all well expressed in the '*Thoughts of Basava*' and selections made by Mr. N.K.Sanganalmath. His book vividly presents the broad features of Lingayatism"[೭].

ಸಂಗನಾಳಮಠರ ಅನುವಾದ ಮೇಲ್ನೋಟಕ್ಕೆ ಪದ್ಯದಂತೆ ಕಂಡರೂ ಅದು ಇರುವುದು ಗದ್ಯ ಲಯದಲ್ಲಿಯೇ. ಭಾಷಾಂತರಕ್ಕೆ ಆಯ್ದುಕೊಂಡ ವಚನಗಳನ್ನು God is One and Only, Basva's conception of God as he experienced it, False deities are condemned, The way to realize God, Who is a Sharana? Basava's devotion to Sangamesh, Basva's submission to Sangamesh, Basva's criticism of the caste system, Ethical sayings of Basava,Miscellaneous Sayings ಮತ್ತು Basava's Idealism ಎಂದು ವಿಂಗಡಿಸುತ್ತಾರೆ.

ಹರ್ಡೇಕರ ಮಂಜಪ್ಪನವರು 'ವಚನಕಾರರ ಸಮಾಜರಚನೆ' ಪುಸ್ತಕವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಆರ್.ಆರ್.ದಿವಾಕರ, ಎಮ್.ಆರ್.ಶ್ರೀನಿವಾಸಮೂರ್ತಿ, ಟಿ.ಎಸ್.ವೆಂಕಣ್ಣಯ್ಯ, ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರ ಹನ್ನೆರಡು ಕನ್ನಡ ಲೇಖನಗಳಿವೆ.ಈ ಪುಸ್ತಕವನ್ನು ೧೯೪೦ರಲ್ಲಿ ಎಸ್.ಬಿ.ಬೋಂದಾಡೆ ಅವರು *Social Structure of the Veerashaiva Saints* ಶೀರ್ಷಿಕೆಯೊಂದಿಗೆ ಅನುವಾದಿಸಿ ಪ್ರಕಟಿಸಿದರು. ಇಲ್ಲಿ ಈಗಾಗಲೇ ಪ್ರಕಟವಾದ ಮಾಸ್ತಿಯವರ *Sayings of Basavanna* ದಿಂದ ೨೦ ವಚನಗಳನ್ನು ಆಯ್ದುಕೊಂಡು ಪ್ರಕಟಿಸಿದುದಲ್ಲದೆ, ಎಸ್.ಬಿ.ಬೋಂದಾಡೆ ಅವರು ತಾವೇ ೨೦ ವಚನಗಳನ್ನು ಅನುವಾದಿಸಿ ಕೊಟ್ಟಿದ್ದಾರೆ. ಇವುಗಳಲ್ಲಿ ಮೂರು ವಚನಗಳನ್ನು ಹೊರತುಪಡಿಸಿ ಉಳಿದ ಹದಿನೇಳು ವಚನಗಳು ಬಸವಣ್ಣನ ಸ್ವನಿವೇದನೆಯ ವಚನಗಳಾಗಿವೆ. ಮಾಸ್ತಿಯವರ ಪ್ರಭಾವ ಬೋಂದಾಡೆ ಅವರ ಅನುವಾದದಲ್ಲಿ ಎದ್ದು ಕಾಣುತ್ತದೆ. ಹರ್ಡೇಕರ ಮಂಜಪ್ಪನವರ ಒಡನಾಡಿಯಾಗಿ ಶರಣಸಂಸ್ಕೃತಿಯಲ್ಲಿ ಬೆಳೆದ ಬೋಂದಾಡೆಯವರು ಎತ್ತಿಕೊಂಡುದು ನೀತಿಪ್ರಧಾನ ವಚನಗಳಾಗಿರುವುದು ಸಹಜವೇ ಆಗಿದೆ. ಇದೇ ಪುಸ್ತಕ ೧೯೯೦ ರಲ್ಲಿ ಬಸವ ಸಮಿತಿಯಿಂದ ಮರು ಮುದ್ರಣ ಕಂಡಿದೆ.

೧೯೪೦ ರಲ್ಲಿ ಮೊದಲ ಬಾರಿಗೆ ವಚನಗಳ ಅನುವಾದದ ಸಾಲುಗಳನ್ನು ಪದ್ಯದಂತೆ ಅಡಕಲೇರಿಸಿದ ಹೆಗ್ಗಳಿಕೆ ಎಸ್.ಎಸ್.ಬಸವನಾಳ ಮತ್ತು ಕೆ.ಆರ್.ಶ್ರೀನಿವಾಸ ಅಯ್ಯಂಗಾರ ಅವರಿಗೆ ಸಲ್ಲುತ್ತದೆ. ಅವರ *Musings of Basava–A Free Rendering* ಬಾಸೆಲ್ ಮಿಷನ್ ಪ್ರೆಸ್ಸಿನಿಂದ ಮುದ್ರಿತವಾಯಿತು. ಬಸವಣ್ಣನ ೮೦ ಮತ್ತು ಅಕ್ಕ ಮಹಾದೇವಿಯ ೬ (*Rhapsodies of Sister Mahadevi*) ವಚನಗಳು ಅನುವಾದಗೊಂಡಿವೆ. ೩೮ ಪುಟಗಳ ಸುದೀರ್ಘ ಮುನ್ನುಡಿಯಲ್ಲಿ ಅನುಭಾವಸಾಹಿತ್ಯ, ಅದರ ಮಹತ್ವ, ಶಿವಶರಣರ ವಚನಗಳ ಪ್ರಸ್ತುತತೆ, ಜಗತ್ತಿನ ಉಳಿದ ಸಾಹಿತ್ಯ ಪ್ರಕಾರಗಳ ಜೊತೆ ಹೋಲಿಕೆ ಇತ್ಯಾದಿಗಳನ್ನು ಕೊಡಲಾಗಿದೆ. ಈ ಕೃತಿಯಲ್ಲಿ ಆಯ್ದುಕೊಂಡ ವಚನಗಳ ಅನುವಾದದ ಬಗೆಗೆ ತಮ್ಮ ಅನಿಸಿಕೆಯಲ್ಲಿ ಹೀಗೆ ವಿವರಿಸುತ್ತಾರೆ.

In rendering the chosen *vacanas* into English, we hesitated between prose and verse. To render the original prose into English verse, rhymed or unrhymed, would have been wrong altogether: on the contrary, to render the cadenced prose of the original into mere prose would be to make our rendering savourless, Hence we have attempted a "free rendering". making it thus reproduce the original fervour as far as possible'"[೮].

ವಚನಗಳನ್ನು ಆಧುನಿಕ ಹಾಗೂ ಪಾಶ್ಚಾತ್ಯ ಮಾದರಿಯಲ್ಲಿ ಪುನರ್ ವಿನ್ಯಾಸಗೊಳಿಸುವಲ್ಲಿ ಹಾಗು ಅವುಗಳನ್ನು ಪಾಶ್ಚಾತ್ಯ ಭಾವಗೀತೆಗಳಂತೆ (lyric) ಇಂಗ್ಲಿಷ್‌ಗೆ ಅನುವಾದಿಸುವಲ್ಲಿ ಇವರ ಸಾಧನೆ ಅವಿಸ್ಮರಣೀಯ. ತಾವು ಮುಕ್ತಭಾಷಾಂತರ ಮಾಡಿದುದನ್ನು ಸಮರ್ಥಿಸಿಕೊಳ್ಳುತ್ತಾ ತಮಗಿದ್ದ ಸಿದ್ಧ ಮಾದರಿಯನ್ನು ಇಲ್ಲಿ ನೆನೆಯುತ್ತಾರೆ. ಈ ಕೃತಿಯನ್ನು ಕುರಿತು "ವಚನಗಳನ್ನು ಆಧುನಿಕಗೊಳಿಸಲು ಹಾಗೂ ಭಾಷಾಂತರಿಸಲು ಮೂಲ ಹಿಬ್ರೂಭಾಷೆಯಿಂದ ಆಧುನಿಕಗೊಳಿಸಲ್ಪಟ್ಟ ಬೈಬಲ್ ಇವರಿಗೆ ನಿದರ್ಶನವಾಯಿತು. ತಮ್ಮ ಭಾಷಾಂತರಗಳನ್ನು ಪರಿಚಯಿಸುತ್ತಾ, ವಚನಗಳ ಬಗ್ಗೆ ಅನೇಕ ವಿಚಾರಗಳನ್ನು ಮಂಡಿಸಿದ್ದಾರೆ. ಅದರಲ್ಲಿ ಬಸವಣ್ಣ ಹಾಗೂ ವೀರಶೈವ ಚಳುವಳಿಯ ಬಗ್ಗೆ ಹೆಮ್ಮೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ವಚನಗಳ ಬಗ್ಗೆ ಹಳಕಟ್ಟಿ ಹಾಗೂ ಇವರ ನಡುವೆ ಇರುವ ಭಿನ್ನತೆಗಳು ಎದ್ದು ಕಾಣಿಸುತ್ತವೆ. ಇಬ್ಬರ ದೃಷ್ಟಿಕೋನಗಳೂ ಸಹ ಭಿನ್ನ. ಹಳಕಟ್ಟಿಯವರಿಗೆ ವಚನಗಳು ಶಾಸ್ತ್ರೀಯ ವಾಙ್ಮಯಗಳಾಗಿ ಕಂಡರೆ, ಬಸವನಾಳ ಮತ್ತು ಶ್ರೀನಿವಾಸ ಅಯ್ಯಂಗಾರರಿಗೆ ಅವು ಕಾವ್ಯದ ಅಂಶಗಳನ್ನು ಒಳಗೊಂಡಿರುವ ಸಾಹಿತ್ಯ"[೯]. ಎಂದು ಹೇಳಿದುದನ್ನು ಇಲ್ಲಿ ನೆನೆಬಹುದು.

ಇ.ಪಿ.ರೈಸ್‌ರ ನಂತರ ಅಕ್ಕ ಮಹಾದೇವಿಯ ವಚನಗಳನ್ನು *Rhapsodies of Sister Mahadevi* ಶೀರ್ಷಿಕೆಯಲ್ಲಿ ೬ ವಚನಗಳನ್ನು ಕನ್ನಡೇತರರಿಗೆ ಪರಿಚಯಿಸಿದ ಶ್ರೇಯಸ್ಸು ಇವರಿಗೇ ಸಲ್ಲಬೇಕು. "ಇದೇ ಕೃತಿಯನ್ನು ಕೇಂಬ್ರಿಜ್ ವಿಶ್ವವಿದ್ಯಾಲಯದ Dr.E.J.Thomas ಅವರ ಮುನ್ನುಡಿಯೊಂದಿಗೆ *The Mystic Poets of South India* ಹೆಸರಿನಿಂದ, ಓರಿಯಂಟಲ್ ಇನಸ್ಟಿಟ್ಯೂಟನ ನಿರ್ದೇಶಕರಾಗಿದ್ದ J.L.Crammer Byng ಇವರ *Wisdom of the East* ಎಂಬ ಮಾಲಿಕೆಯಲ್ಲಿ ಪ್ರಕಟಿಸುವ ಯೋಜನೆ

ಹಾಕಿಕೊಂಡಿದ್ದರೆಂದೂ ನಂತರ ಬಸವನಾಳ ಅವರ ನಿಧನದಿಂದ ಆ ಯೋಜನೆ ಕಾರ್ಯಗತವಾಗಲಿಲ್ಲವೆಂದು ತಿಳಿದು ಬರುತ್ತದೆ"[೧೦].

೧೯೫೦ರಲ್ಲಿ ಅನುವಾದಿಸಿ ಸಿದ್ಧಪಡಿಸಲಾದ ವ್ಹಿ.ಸಿ.ಯಗಟಿಯವರ *Gospel of Basava* ಹಸ್ತಪ್ರತಿಯನ್ನು ತಮ್ಮದೆಂದು ಹೇಳಿಕೊಂಡು ನಾಯಕನಹಳ್ಳಿ ತಿಪ್ಪೇಸ್ವಾಮಿಯವರು *Gospels of Basavanna* ಎಂಬ ಶೀರ್ಷಿಕೆಯೊಂದಿಗೆ ೨೦೦೧ರಲ್ಲಿ ಪ್ರಕಟಿಸಿದ್ದರು. ಈ ಮೋಸ ಆಮೇಲೆ ತಿಳಿದು ಬಂದು, ೨೦೦೭ರಲ್ಲಿ ಎಸ್.ಆರ್.ಗುಂಜಾಳ ಅವರ ಸಂಪಾದಕತ್ವದಲ್ಲಿ ಇದು ಇನ್ನೊಮ್ಮೆ ಬೆಳಕು ಕಂಡಿತು. ಬೆಂಗಳೂರಿನ ಬಸವ ಸಮಿತಿ, ಇದರ ಪ್ರಕಾಶಕರು. ಇಲ್ಲಿ ಬಸವಣ್ಣನವರ ಷಟಸ್ಥಲದ ೯೫೬ ವಚನಗಳನ್ನು ಅನುವಾದಿಸಲಾಗಿದೆ. ಹಳಕಟ್ಟಿಯವರ ನಿಕಟ ಸಂಪರ್ಕವಿದ್ದ ಯಗಟಿ ವೀರಪ್ಪನವರು ತಮ್ಮ ವಕೀಲಿ ವೃತ್ತಿಯಲ್ಲಿಯೂ ಬಸವಣ್ಣನವರ ಆದರ್ಶಗಳನ್ನು ಪರಿಪಾಲಿಸಿಕೊಂಡು ಶರಣ ಧರ್ಮವನ್ನು ನಿತ್ಯ ಜೀವನದಲ್ಲಿ ಆಚರಿಸಿದವರು. ಅವರ ಅನುವಾದಗಳನ್ನು ಸಾಹಿತ್ಯಿಕ ದೃಷ್ಟಿಯಿಂದ ಪರಿಗಣಿಸುವಕ್ಕಿಂತ ಒಬ್ಬ ಸಾಧಕನ ದೃಷ್ಟಿಕೋನದಿಂದ ಪರಿಶೀಲಿಸಬಹುದು. ಯಗಟಿಯವರು ಷಟಸ್ಥಲದ ಕ್ರಮದಲ್ಲಿ ವಚನಗಳನ್ನು ಗುರುತಿಸಿ ಎಲ್ಲ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ ಮೊದಲ ಮಹನೀಯರಾಗಿದ್ದಾರೆ.

ವಚನ ಮಂಟಪ ಬೆಳಗಾವಿಯಿಂದ ೧೯೫೨ರಲ್ಲಿ ಪ್ರಕಾಶಿಸಲ್ಪಟ್ಟ ಸಿ.ಎಸ್.ಬಾಗಿಯವರ *Selected Sayings of Basava* ಒಟ್ಟು ೨೨೬ ವಚನಗಳನ್ನು ಹೊಂದಿದೆ. ಮುಕ್ತಭಾಷಾಂತರ ಮಾಡಿದುದನ್ನು ಮುನ್ನುಡಿಯಲ್ಲಿ ಸಮರ್ಥಿಸಿಕೊಳ್ಳುತ್ತ, "A sincere attempt has been made in these renderings to reproduce as much of the sense and effect of the originals as was possible at first venture"[೧೧] ಎಂದು ಹೇಳಿದ್ದಾರೆ. ಅದು ಅವರ ಅನುವಾದದಲ್ಲಿ ಕೂಡ ಪ್ರತಿಫಲನಗೊಂಡಿದೆ.

ವಚನಸಾಹಿತ್ಯಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಕೊಡುಗೆ ವಿಶೇಷವಾದುದು. ಡಾ.ಪಾವಟೆಯವರು ಕುಲಪತಿಯಾಗಿದ್ದ ಸಂದರ್ಭದಲ್ಲಿ ಕನ್ನಡದಲ್ಲಿ ಸಮಗ್ರ ವಚನಸಾಹಿತ್ಯ ಪ್ರಕಟಣೆ ಮತ್ತು ಶೂನ್ಯಸಂಪಾದನೆಯ ಅನುವಾದ ಹೀಗೆ ಎರಡು ಯೋಜನೆಗಳು ಅಸ್ತಿತ್ವಕ್ಕೆ ಬಂದವು. ಶೂನ್ಯ ಸಂಪಾದನೆಯ ಅನುವಾದದ ಮಹತ್ವವನ್ನು ಸೂಚಿಸಿದ ಧಾರವಾಡದ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮೀಜಿಯವರ ನೇತೃತ್ವದಲ್ಲಿ ಈ ಯೋಜನೆ (ತತ್ವಶಾಸ್ತ್ರ ವಿಭಾಗದಲ್ಲಿ) ಅಸ್ತಿತ್ವಕ್ಕೆ ಬಂದಿತು. ಕಾರಣಾಂತರಗಳಿಂದ ಬೇರೆ ಬೇರೆ ಅನುವಾದಕ ಸಮಿತಿಗಳು ಆಕಾರ ಪಡೆದು ೫ ಸಂಪುಟಗಳು ಕ್ರಮವಾಗಿ ಹೊರಬಂದವು: ಎಸ್.ಸಿ.ನಂದೀಮಠ, ಅರ್ಮ್ಯಾಂಡೊ ಮೆನೆಜಿಸ್ ಮತ್ತು ಆರ್.ಸಿ.ಹಿರೇಮಠ ಅವರ ಸಂಪಾದನೆಯಲ್ಲಿ ಮೊದಲ ಸಂಪುಟ ೧೯೬೫ ರಲ್ಲಿ ಪ್ರಕಟವಾದರೆ, ಎಸ್.ಎಸ್. ಭೂಸನೂರಮಠ ಮತ್ತು ಅರ್ಮ್ಯಾಂಡೊ ಮೆನೆಜಿಸ್ ಅವರ ಸಂಪಾದಕತ್ವದಲ್ಲಿ ಎರಡನೆಯ ಸಂಪುಟ ೧೯೬೮ರಲ್ಲಿ, ಎಂ.ಎಸ್.ಸುಂಕಾಪುರ ಮತ್ತು ಅರ್ಮ್ಯಾಂಡೊ ಮೆನೆಜಿಸ್ ಅವರ ಸಂಪಾದಕತ್ವದಲ್ಲಿ, ಮೂರನೆಯ ಸಂಪುಟ ೧೯೬೯ ರಲ್ಲಿ, ನಾಲ್ಕನೆಯ ಸಂಪುಟ ೧೯೭೦ ರಲ್ಲಿ, ಮತ್ತು ಕೊನೆಯ ಸಂಪುಟ (ಐದನೆಯ) ೧೯೭೨ರಲ್ಲಿ ಹೊರಬಂದವು. ಅವುಗಳ ಅನುವಾದದ ಅವಶ್ಯಕತೆಯ ಬಗೆಗೆ ಬರೆಯುತ್ತ ಅಂದಿನ ಉಪಕುಲಪತಿಗಳಾದ ಡಾ.ಪಾವಟೆಯವರು ಅವರು ಹೀಗೆ ಹೇಳಿದ್ದಾರೆ: "Some attempts have been made in recent times to publish the original

*Shunya Sampadane* in Kannada, but for the benefit of non-kannada readers, a comprehensive edition with an English translation of each vachana and an introduction in English was felt to be necessary"[೧೨] ಈ ಶೂನ್ಯಸಂಪಾದನೆಯ ಅನುವಾದ ಯೋಜನೆಯಲ್ಲಿ ಅರ್ಮ್ಯಾಂಡೊ ಮೆನೆಜಿಸ್ ಮತ್ತು ಎಸ್.ಎಮ್.ಅಂಗಡಿಯವರ ಶ್ರಮ ಎದ್ದುಕಾಣುತ್ತದೆ.

೧೯೬೫ರಲ್ಲಿ ಶೂನ್ಯಸಂಪಾದನೆಯ ಪ್ರಥಮ ಸಂಪುಟ ಅಲ್ಲದೇ ಬಸವಣ್ಣನ ವಚನಗಳ ಇನ್ನೂ ಎರಡು ಅನುವಾದಿತ ಕೃತಿಗಳು ಪ್ರಕಟಗೊಂಡವು. ಅವು ಈ ಕೆಳಗಿನಂತಿವೆ :

೧. ಅಣ್ಣನ ಬಳಗ ಸಿರಿಗೆರೆ ಇವರು ಅರ್ಮ್ಯಾಂಡೊ ಮೆನೆಜಿಸ್ ಮತ್ತು ಎಸ್.ಎಮ್.ಅಂಗಡಿಯವರ ಮೂಲಕ *Vacanas of Basavanna: A Selection* ಹೆಸರಿನ ೧೬೦ ವಚನಗಳ ಅನುವಾದದ ಚಿಕ್ಕ ಹೊತ್ತಿಗೆಯನ್ನು ಹೊರತಂದರು. ಈ ಕೃತಿ ಮುಂದೆ ೧೯೬೭ರಲ್ಲಿ ಬೃಹತ್ ಕೃತಿಯಾಗಿ ಹೊರ ಬರಲು ಕಾರಣವಾಯಿತು. ಮೂಲ ಕೃತಿಯನ್ನು ಫ.ಗು.ಹಳಕಟ್ಟಿಯವರಿಗೆ ಅರ್ಪಿಸಲಾಗಿದ್ದು, ಹರ್ಡೇಕರ್ ಮಂಜಪ್ಪನವರ ಸ್ಮರಣಾರ್ಥವಾಗಿ ಪ್ರಕಟಿಸಲಾಗಿದೆ.

೨. ಬಸವ ಸಮಿತಿ ಬೆಂಗಳೂರು ಇವರು ಸುಂದರರಾಜ್ ಥಿಯೋಡೋರ್ ಮತ್ತು ದೇವೇಂದ್ರಕುಮಾರ ಹಕಾರಿಯವರ *Thus Spake Basava: English Renderings of Basava's Vacanas* ಹೆಸರಿನ ೧೦೮ ವಚನಗಳ ಅನುವಾದ ಕೃತಿಯನ್ನು ಹೊರತಂದರು. ಬಸವ ಸಮಿತಿಯಿಂದ ನಿಯಮಿಸಲ್ಪಟ್ಟ ಶ್ರೀ ಟಿ.ಎನ್.ಮಲ್ಲಪ್ಪ, ಶ್ರೀ ಸಿದ್ದಯ್ಯಪುರಾಣಿಕ ಮತ್ತು ಶ್ರೀ ಜೀರಿಗೆಕಟ್ಟೆ ಬಸವಪ್ಪನವರನ್ನೊಳಗೊಂಡ ಸಮಿತಿ ಆಯ್ದುಕೊಟ್ಟ ವಚನಗಳ ಅನುವಾದ ಸಂಗ್ರಹವಿದು. ಅನುವಾದಕರು ಹೇಳಿದ "this translation has no high claims to make except perhaps that it has tried to keep faith with the original in structure, form and content"[೧೩]. ಎಂಬ ಮಾತು ಸ್ಮರಣೀಯವಾಗಿದೆ.

೧೯೬೬ರಲ್ಲಿ ವೈ.ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲಿದ್ದ "ಬಳ್ಳಾರಿ ಸಾಹಿತ್ಯ ಅಕಾಡೆಮಿ"ಯು ಪಿ.ಶಾಮರಾವ್ ಅವರಿಂದ *Veerasaiva Vachanas & Vachanakaras* ಎಂಬ ಕೃತಿಯನ್ನು ಪ್ರಕಟಿಸಿತು. ಅದರಲ್ಲಿ ಅಕ್ಕಮಹಾದೇವಿ–೫೭, ಅಲ್ಲಮಪ್ರಭು–೮೨, ಅಂಬಿಗರ ಚೌಡಯ್ಯ–೧೫, ಅರಿವಿನ ಮಾರಿತಂದೆ–೧, ಆದಯ್ಯ–೫, ಬಸವಣ್ಣ–೧೬೬, ಬೊಂತಾ ದೇವಿ–೧, ಬೊಮ್ಮಣ್ಣ–೧, ಚಂದಿಮರಸ–೨, ಚಂದಿಮರೆಪ್ಪ–೧, ಚನ್ನಬಸವಣ್ಣ–೩೦, ಜೇಡರ ದಾಸಿಮಯ್ಯ–೨೨, ಕಾಡ ಸಿದ್ಧೇಶ್ವರ–೨, ಲಕ್ಕಮ್ಮ–೩, ಮರೆಯ್ಯ ಪುಣ್ಯಸ್ತ್ರೀ ಮಹದೇವಿ–೨, ಮೋಳಿಗೆಯ ಮಾರಯ್ಯ–೪, ನಗೆ ಮಾರಿತಂದೆ–೧, ನೀಲಲೋಚನೆ೨, ನೀಲಾಂಬಿಕೆ–೧, ನುಲಿಯ ಚಂದಯ್ಯ–೧, ಪುರದ ನಾಗಣ್ಣ–೧, ಸಕಲೇಶಮಾದರಸನ೭, ಸತ್ಯಕ್ಕ–೧, ಸ್ವತಂತ್ರ ಸಿದ್ಧಲಿಂಗೇಶ್ವರ–೯, ಷಣ್ಮುಖ ಸ್ವಾಮಿ–೭, ಸಿದ್ಧರಾಮ–೨೯, ಶಿವಲೆಂಕ ಮಂಚಣ್ಣ–೨, ತೋಂಟದ ಮಹಲಿಂಗ ಯತಿಗಳ–೧, ಮತ್ತು ತೋಂಟದ ಸಿದ್ಧಲಿಂಗ ಯತಿಗಳ–೫ ಹೀಗೆ ಒಟ್ಟು ೪೬೧ ವಚನಗಳ ಅನುವಾದ ಕಂಡು ಬರುತ್ತದೆ. ೨೯ ವಚನಕಾರರ ವಚನಗಳನ್ನು ಒಂದೆಡೆಗೆ ತಂದ ಮೊದಲ ಶ್ರೇಯಸ್ಸು ಪಿ.ಶಾಮರಾವ್ ಅವರಿಗೆ ಸಲ್ಲುತ್ತದೆ. ಇಲ್ಲಿ ಅವರು ವಚನಕಾರರ ಜೀವನಚರಿತ್ರೆಯನ್ನೊಳಗೊಂಡ ೧೨೩

ಪುಟಗಳ ಸುದೀರ್ಘ ಮುನ್ನುಡಿಯನ್ನು ಕೊಟ್ಟು ಅವತ್ತಿನ ಕೆಲವು ಸಂದೇಹಗಳಿಗೆ ಸೂಕ್ತ ಪರಿಹಾರ ನೀಡಿದ್ದಾರೆ. ವೈ.ನಾಗೇಶ ಶಾಸ್ತ್ರಿಗಳ ಮುನ್ನುಡಿಯಲ್ಲಿಯ

"the rendering is simple,lucid and direct. The spirit of the original vacanas is so beautifully conveyed in this English translation,that we get a feeling that they are original"[೧೪] ಎಂಬ ಮಾತನ್ನು ಮತ್ತು ಪಿ.ಶಾಮರಾವ್ ಅವರು ತಮ್ಮ ಅನುವಾದಗಳ ಬಗೆಗೆ ಕೊಡುವ "Excepting in a few instances of Allama Prabhu's and Siddarama's which are cryptic and sutraic and of others in place where they refer to the ritualism of their sect, the vachanas are quite clear and need no annotation to carry their message into the hearts of the ordinary"[೧೫]. ಎಂಬ ಅಭಿಪ್ರಾಯವನ್ನು ಗಮನಿಸಬಹುದು.

೧೯೬೭ರಲ್ಲಿ ಎರಡು ಬೃಹತ್ ಅನುವಾದಿತ ಕೃತಿಗಳು ಪ್ರಕಟಗೊಂಡವು. ಅವುಗಳಲ್ಲಿ ಒಂದು ಮೈಸೂರು ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದ ಮುಖ್ಯಸ್ಥರಾದ ಟಿ.ಜಿ.ಸಿದ್ಧಪ್ಪಾರಾಧ್ಯ ಅವರು ಅನುವಾದಿಸಿ, ಚಿತ್ರದುರ್ಗದ ಶ್ರೀಮಠದಿಂದ ಪ್ರಕಟಿಸಿದ್ದಾರೆ. ಇದರಲ್ಲಿ ಅನುವಾದಿತ ೭೭೦ ವಚನಗಳಿವೆ. ಇಲ್ಲಿ ಕನ್ನಡದ ವಚನಗಳನ್ನು ದೇವನಾಗರಿಗೆ ಲಿಪ್ಯಂತರ ಮಾಡಿ, ನಂತರ ಸಂಸ್ಕೃತಕ್ಕೆ ಅನುವಾದಿಸಿ ಮುಂದುವರಿದು ಅದನ್ನೇ ಇಂಗ್ಲಿಷನಲ್ಲಿ ಸರಳಾನುವಾದಗೊಳಿಸಿದ್ದಾರೆ. ಈ ಬೃಹತ್ ಗ್ರಂಥವನ್ನು *Basava Gita* ಎಂಬ ಹೆಸರಿನಿಂದ ಹೊರತಂದಿದ್ದು : ಈ ಕೃತಿಗೆ ಅಂತಹ ಶೀರ್ಷಿಕೆಯನ್ನಿಡಲು ಭಗವದ್ಗೀತೆಯು ಕಾರಣವಾಗಿರಬಹುದು. ಇಂಗ್ಲಿಷ್, ಸಂಸ್ಕೃತ ಬಲ್ಲ ವಿದ್ವಾಂಸರನ್ನು ಲಕ್ಷ್ಯದಲ್ಲಿಟ್ಟು ರಚಿಸಿದ ಕೃತಿಯಿದು. ಇನ್ನೊಂದು ಕರ್ನಾಟಕ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾದ ಅರ್ಮ್ಯಾಂಡೊ ಮೆನೆಜಿಸ್ ಅವರು ಎಸ್.ಎಮ್.ಅಂಗಡಿಯವರ ಜೊತೆಗೂಡಿ ಅನುವಾದಿಸಿದ್ದಾರೆ. ಇದನ್ನು ಸಿರಿಗೆರೆಯ ಮಠದ ಅಣ್ಣನ ಬಳಗದ ಮುಖಾಂತರ *Vacanas of Basavanna* ಎಂಬ ಹೆಸರಿನಲ್ಲಿ ಹೊರತರಲಾಗಿದೆ. (ಷಟಸ್ಥಲದ ೯೫೮ ಮತ್ತು ೩೨೭ ಹೆಚ್ಚಿನ ವಚನಗಳು) ಇವತ್ತಿನ ವರೆಗೂ ಬಸವಣ್ಣನ ಎಲ್ಲ ವಚನಗಳನ್ನು ಅನುವಾದಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಬಸವಣ್ಣನವರ ವಚನಗಳ ಅನುವಾದದ ದೃಷ್ಟಿಯಿಂದಲೂ ಕೂಡ ಈ ಕೃತಿ ಗಮನಾರ್ಹವಾಗಿದೆ,

"This is the first time that all the Vacanas of Basavanna are being translated into English and published.This is the first complete old Kannada work rendered into English.It is a matter pride to the Balaga to have brought out a work of this magnitude"[೧೬]. "ಎಂದು ಹೇಳುತ್ತ ೭೩ ಪುಟಗಳ ಸುದೀರ್ಘ ಮುನ್ನುಡಿಯಲ್ಲಿ ವಚನಸಾಹಿತ್ಯದ ಮುಖ್ಯ ಅಂಶಗಳ ಮೇಲೆ ತಮ್ಮ ವಿದ್ವತ್‌ಪೂರ್ಣ ವಿಚಾರಗಳನ್ನು ಮಂಡಿಸಿದ್ದಾರೆ. ಅರ್ಮ್ಯಾಂಡೊ ಮೆನೆಜಿಸ್ ಅವರಿಗೆ ಆಂಗ್ಲ ಭಾಷೆ–ಸಾಹಿತ್ಯಗಳ ಆಳವಾದ ಜ್ಞಾನವಿತ್ತು ಮತ್ತು ಅವರು ಕವಿಗಳೂ ಆಗಿದ್ದರು. ಅಂಗಡಿಯವರೊಂದಿಗೆ ಕೂಡಿ ಅನುವಾದಿಸಿದ *Vacanas of Akka Mahadevi(೧೯೭೩), Vacanas*

*of Siddharama* (೧೯೭೮) ಅಲ್ಲದೆ ಶೂನ್ಯಸಂಪಾದನೆಯ ಅನುವಾದಿತ ಸಂಪುಟಗಳು ಇವರ ಪಾಂಡಿತ್ಯಕ್ಕೆ ನಿದರ್ಶನವಾಗಿವೆ. *Vacanas of Basavanna*ದ ಅನುವಾದದ ಪ್ರಕ್ರಿಯೆ ಮತ್ತು ವಸ್ತು ವಿನ್ಯಾಸದ ಬಗೆಗೆ ಬರೆಯುತ್ತ" ಪ್ರಸ್ತುತ "in using the verse form, with a kind of controlled diction, in their renderings the present translators have not tried to heighten the poetic or literary value of the originals; rather their one preoccupation has been to preserve, as far as it lay in their power,their high level of literary expression,so perfectly adapted to their theme and purpose"[೧೬]. ಎಂದು ತಮ್ಮ ಅನುವಾದದ ಇತಿ–ಮಿತಿಗಳನ್ನು ಪ್ರಾಮಾಣಿಕವಾಗಿ ಸೂಚಿಸಿದ್ದಾರೆ. ೧೯೬೭ರಲ್ಲಿ ಶ್ರೀ ಸದಾಶಿವ ಒಡೆಯರ ಅವರ ಸಂಪಾದಕತ್ವದಲ್ಲಿ ಬಸವೇಶ್ವರ ಅಷ್ಟಶತಮಾನೋತ್ಸವದ ಸ್ಮರಣ ಸಂಪುಟಕ್ಕಾಗಿ ನಾಡಿನ ಖ್ಯಾತನಾಮರಿಂದ ಲೇಖನಗಳನ್ನು ಆಹ್ವಾನಿಸಿ ಒಂದು ಬೃಹತ್ ಗ್ರಂಥವನ್ನು ಪ್ರಕಟಿಸಿಲಾಯಿತು. ಅದು ಒಂದು ಉಲ್ಲೇಖನೀಯವಾದ ಕಾರ್ಯವಾಗಿದೆ. ವಿ.ಕೃ.ಗೋಕಾಕ,ಕುಮಾರ ಸ್ವಾಮೀಜಿ, ಎನ್.ಯಮುನಾಚಾರ್ಯ, ಆರ್.ಆರ್.ದಿವಾಕರ, ಮೊದಲಾದವರಿಂದ ಇಂಗ್ಲಿಷನಲ್ಲಿ ಬಸವಣ್ಣನವರ ಕುರಿತು ವಿವಿಧ ವಿಚಾರಗಳನ್ನೊಳಗೊಂಡ ಲೇಖನಗಳಿವೆ. ಹೆಚ್ಚಿನ ಬರಹಗಾರರು ತಮ್ಮ ಲೇಖನಗಳಲ್ಲಿ ಸಾಂದರ್ಭಿಕವಾಗಿ ಬಸವನಾಳ–ಅಯ್ಯಂಗಾರ, ಥಿಯೋಡೋರ–ಹಕಾರಿ, ಮೆನೆಜಿಸ್–ಅಂಗಡಿ ಮತ್ತು ಬಾಗಿಯವರ ಅನುವಾದಿತ ವಚನಗಳನ್ನು ಆಯ್ದು ಉದ್ಧರಿಸಿದರೆ, ಎನ್.ಯಮುನಾಚಾರ್ಯ ಅವರು ತಮ್ಮ ಲೇಖನದಲ್ಲಿ ೨೯ ವಚನಗಳನ್ನು ತಾವೇ ಸ್ವತಃ ಅನುವಾದಿಸಿ ನೀಡಿದ್ದಾರೆ.

೧೯೬೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆ, ಪಿ.ಬಿ.ದೇಸಾಯಿಯವರ *Basaveshwara and His Times* ಎಂಬ ವಿದ್ವತ್‌ಪೂರ್ಣ ಕೃತಿ ಪ್ರಕಟಿಸಿತು. ಇಲ್ಲಿ ದೇಸಾಯಿಯವರು ಇತರರಿಂದ ಅನುವಾದಗೊಂಡ ವಚನಗಳನ್ನು ಬಳಸಿಕೊಳ್ಳದೆ, ತಾವೇ ಆಯ್ದುಕೊಂಡ ೩೫ ವಚನಗಳನ್ನು ಇಂಗ್ಲಿಷ್‌ಗೆ ತರ್ಜುಮೆ ಮಾಡಿದ್ದಾರೆ.

ಅರ್ಮ್ಯಾಂಡೊ ಮೆನೆಜಿಸ್ ಅವರು ತಮ್ಮ ಸುಪ್ತಕವಿತ್ವವನ್ನು ೧೯೭೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪ್ರಕಟಗೊಂಡ *Songs from Sharanas and other poems* ಎಂಬ ಕಿರು ಹೊತ್ತಿಗೆಯಲ್ಲಿ ತೋರಿದ್ದಾರೆ. ವಿವಿಧ ಮೂಲಗಳಿಂದ ಆಯ್ದ ವಚನ ಮತ್ತು ಗೀತೆಗಳನ್ನು–ಬಸವಣ್ಣ, ಅಕ್ಕ ಮಹಾದೇವಿ, ಅಲ್ಲಮ ಪ್ರಭು, ಸಿದ್ಧರಾಮ, ನಿಜಗುಣ ಶಿವಯೋಗಿ, ಮೀರಾಬಾಯಿ ಮತ್ತು ಕೆಲವು ಕ್ರಿಶ್ಚಿಯನ್ ಮತ್ತು ಸುಫಿ ಸಂತರ ಬಗೆಗೆ ಬರೆದ ಗೀತೆಗಳನ್ನು ಇದು ಒಳಗೊಂಡಿದೆ. ಹಿಂದಿನ ಹತ್ತು ವರ್ಷಗಳ ವಚನಸಾಹಿತ್ಯ ಅನುವಾದದ ಅನುಭವ ಇಲ್ಲಿ ಉಪ ಉತ್ಪಾದನೆ (by-product) ಯಾಗಿ ಹೊರ ಹೊಮ್ಮಿದಂತಿದೆ.

ಅಮೇರಿಕೆಯಲ್ಲಿ ವಾಸಿಸಿದ್ದ ದಕ್ಷಿಣ ಭಾರತೀಯ ಭಾಷೆಗಳ ತಜ್ಞ A.K.Ramanujan ಅವರು ಪ್ರತಿಷ್ಠಿತ ಪೆಂಗ್ವಿನ್ ಪ್ರಕಾಶನದ ಮೂಲಕ ನಾಲ್ವರು ಶರಣರ ೧೫೫ ವಚನಗಳ ಅನುವಾದವನ್ನು *Speaking of Siva* ಕೃತಿಯ ಮೂಲಕ ಪ್ರಕಟಿಸಿದರು. ಅವರು ಬಸವಣ್ಣನ ೪೨, ಜೇಡರ ದಾಸಿಮಯ್ಯನ

೨೮, ಅಕ್ಕಮಹಾದೇವಿಯ ೪೭ ಮತ್ತು ಅಲ್ಲಮಪ್ರಭುವಿನ ೩೮ ವಚನಗಳನ್ನು ತರ್ಜುಮೆ ಮಾಡಿದ್ದಾರೆ. ಜೊತೆಗೆ ಅನುವಾದಕನ ಟಿಪ್ಪಣಿಗೆ ೧೫ ಪುಟ ಮತ್ತು ಪರಿಚಯಾತ್ಮಕ ವಿವರಣೆಗೆ ೩೭ ಪುಟ ಮೀಸಲಿಟ್ಟಿದ್ದು, ವಚನಸಾಹಿತ್ಯ ಮತ್ತು ಷಟಸ್ಥಲಸಿದ್ಧಾಂತದ ಬಗೆಗೆ ಇಲ್ಲಿಸುದೀರ್ಘ ವಿವರಣೆ ಕೊಡುತ್ತಾರೆ. ಮುಂದುವರಿದು ತಾವು ಆರಿಸಿಕೊಂಡ ವಚನಗಳ ಬಗ್ಗೆ ಕೆಳಗಿನಂತೆ ಸಮರ್ಥನೆ ಕೊಡುತ್ತಾರೆ.

"I have tried to choose (a) good poems, (b) poetry representative ofthe poet (c) poems thematically typical of the vacana tradition, and (d) a few unique in idea, image or form"[೧೮] ರಾಮಾನುಜನ್ ಅವರು ವಚನ ಅಥವಾ ವಚನಕಾರರು ಎನ್ನದೆ ಕವಿ ಮತ್ತು ಕಾವ್ಯ ಎಂದಿರುವುದು ಗಮನಾರ್ಹವಾಗಿದೆ. ರಾಮಾನುಜನ್ ಅವರ ಅನುವಾದದ ನಂತರ ವಿದೇಶಿಯರು ವಚನಸಾಹಿತ್ಯದ ಕಡೆಗೆ ಹೆಚ್ಚು ಗಮನ ಹರಿಸಿದುದು ಕಂಡುಬರುತ್ತದೆ. ಓ.ಎಲ್.ನಾಗಭೂಷಣಸ್ವಾಮಿಯವರು ಪ್ರಸ್ತುತ ಕೃತಿಯ ಬಗೆಗೆ ಹೀಗೆ ಅಭಿಪ್ರಾಯ ಪಡುತ್ತಾರೆ.

"*Speaking of Siva* gives importance to the 'secular' nature of vacanas, and has gained the acceptance of the western audience and non kannada readers in India. This anthology fits vacana texts to 'modernist literary sensibility' and uses idiom of 'modernist poetry' that was prevalent in the 197 As in the Indian context as a translation strategy"[೧೯].

೧೯೭೩ರಲ್ಲಿಯೇ ಧಾರವಾಡದ ಮನೋಹರ ಅಪ್ಪಾಸಾಹೇಬ ಅಡಕೆ ಅವರು ತಮ್ಮ ತಾಯಿಯ ಸ್ಮರಣಾರ್ಥ ಪ್ರಕಟಿಸಿದ ಅರ್ಮ್ಯಾಂಡೊ ಮೆನೆಜಿಸ್ ಮತ್ತು ಎಸ್.ಎಮ್.ಅಂಗಡಿ ಯವರ *Vacanas of Akka mahadevi*ಯಲ್ಲಿ ೩೧೫ ವಚನಗಳು ಅನುವಾದಗೊಂಡಿವೆ. ಅನುವಾದಿತ ಇಂಗ್ಲಿಷ್ ವಚನಗಳ ಪಠ್ಯದೊಂದಿಗೆ ಕನ್ನಡದ ವಚನಗಳನ್ನೂ ಕೊಟ್ಟು ಸುಮಾರು ೧೮ ಪುಟಗಳ ಟಿಪ್ಪಣಿಗಳನ್ನು ಒದಗಿಸಿದ್ದಾರೆ. ಈ ಮೊದಲು ಇ.ಪಿ.ರೈಸ್–೨, ಬಸವನಾಳ ಮತ್ತು ಅಯ್ಯಂಗಾರ ೬, ಪಿ.ಶಾಮರಾವ್–೫೭ ಮತ್ತು ಎ.ಕೆ ರಾಮಾನುಜನ್–೪೭ ವಚನಗಳನ್ನು ಅನುವಾದಿಸಿದ್ದರು. ಈಗ ಮೊತ್ತ ಮೊದಲ ಬಾರಿಗೆ ಅಕ್ಕನ ಎಲ್ಲ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ ಕೀರ್ತಿ ಅರ್ಮ್ಯಾಂಡೊ ಮೆನೆಜಿಸ್ ಮತ್ತು ಎಸ್.ಎಮ್.ಅಂಗಡಿಯವರಿಗೆ ಸಲ್ಲುತ್ತದೆ.

೧೯೭೫ರಲ್ಲಿ ಗುಲ್ಬರ್ಗಾದ ಸಿದ್ಧವಾಗೀಶ ಪ್ರಕಾಶನದಿಂದ ಬಿ.ಎ.ಪಾಟೀಲರು *Akka Mahadevi, the Divine Cuckoo: English Rendering of Akka's 50 Vacanas* ಎಂಬ ಕೃತಿ ಪ್ರಕಟಿಸಿದ್ದಾರೆ.

೧೯೭೬ರಿಂದ ಪ್ರಕಟಗೊಳ್ಳುತ್ತಿರುವ 'Basava Journal'ನ ಮೂಲಕ ಹಲವಾರು ಲೇಖಕರು ಇವತ್ತಿನ ವರೆಗೂ ತಮ್ಮ ಲೇಖನಗಳಲ್ಲಿ ಸಾಂದರ್ಭಿಕವಾಗಿ ವಚನಗಳನ್ನು ಅನುವಾದಿಸಿ, ಪ್ರಕಟಿಸುತ್ತ ಬಂದಿದ್ದಾರೆ.

೧೯೭೮ರಲ್ಲಿ ಕುದುರಿಮೋತಿ ಬೃಹನ್ಮಠದಿಂದ ಪ್ರಕಾಶಿಸಲ್ಪಟ್ಟ ಗುಲ್ಬರ್ಗದ ಸಿ. ಎನ್.ಹಿರೇಮಠರ *Songs Celestial and Terrestrial*ನಲ್ಲಿ ಬಸವಣ್ಣನವರ ೧೦೮ ವಚನಗಳು ತಕ್ಕ ವಿವರಣಾತ್ಮಕ

ವ್ಯಾಖ್ಯಾನದೊಂದಿಗೆ ಅನುವಾದಗೊಂಡಿವೆ. ಅವರು ಆರಿಸಿಕೊಂಡ ವಚನಗಳ ಬಗ್ಗೆ ಎಸ್.ಎಸ್.ರಾವ್ ಅವರು "The vachanas chosen for translation highlight the quintessence of great Basava philosophy. The commentary thereon, an effective elucidation of the thought of Basava would go a long way in helping the reader understand better the great philosophy"[೨೦]. ಎಂದು ಅಭಿಪ್ರಾಯಪಡುತ್ತಾರೆ.

೧೯೭೭ರಲ್ಲಿ ಮೂರು ಸಾವಿರಮಠ ಹುಬ್ಬಳ್ಳಿಯವರಿಂದ ಪ್ರಕಾಶಿಸಲ್ಪಟ್ಟ *A Garland of Pearls or Basavamala* ಕೃತಿಯಲ್ಲಿ ಪಿ.ಉಮಾಶಂಕರ ಅವರು ೧೬೫ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ವೃತ್ತಿಯಿಂದ ವೈದ್ಯರಾಗಿದ್ದ ಅವರು ಅತಿ ಭಾವುಕತೆಯಿಂದ ಅನುವಾದ ಮಾಡುವುದರ ಜೊತೆಗೆ, ಸಂಬಂಧಪಟ್ಟ-ಸಂಬಂಧಪಡದ ಎಲ್ಲ ವಿಚಾರಗಳನ್ನು ಪ್ರತಿಪಾದಿಸಿದಂತಿದೆ. ಉದಾಹರಣೆಗಾಗಿ, 'ಉಳ್ಳವರು ಶಿವಾಲಯವ ಮಾಡುವರು' ವಚನ ಹೀಗೆ ಅನುವಾದಗೊಂಡಿದೆ.

"Others have money in store to build temples to house the Lord, but what can a poverty stricken person like me build? My body itself is a temple, Things which are static are destrucable but those which are dynamic remains immortal,Oh Lord my master. With a Thunderous voice, full of pomp and show salomalo bade Vittala come to him but Panduranga remained silent Sant Tukaram with sincerity and devotion begged Vittoba to give him darshan, Vittala came dancing towards him pleased by his action.It is the way of worship that makes all the difference"[೨೧].

ಇದು ಕನ್ನಡೇತರ ಅಭ್ಯಾಸಿಗಳಿಗೆ ವಚನದ ಮೂಲ ಅಂಶವನ್ನು ಮರೆಮಾಚುತ್ತದೆ. ೧೯೭೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪ್ರಕಟಗೊಂಡ, ಅರ್ಮ್ಯಾಂಡೊ ಮೆನೆಜಿಸ್ ಮತ್ತು ಎಸ್.ಎಮ್.ಅಂಗಡಿ ಯವರ *Vacanas of Siddharama* ಹೆಸರಿನ ೮೦೯ ಪುಟಗಳ ಬೃಹತ್ ಗ್ರಂಥದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ ಅಂಕಿತವಿರುವ ೧೩೭೮ ವಚನ, 'ಯೋಗಿನಾಥಾ'ಎಂಬ ಅಂಕಿತವಿರುವ ೩೮೯ ರಚನೆಗಳು ಅನುವಾದಗೊಂಡಿವೆ. ಇದರಲ್ಲಿ ೧೭೫ ಪುಟಗಳ ಸುದೀರ್ಘ ಟಿಪ್ಪಣಿ, ಆಕಾರಾದಿ ಸೂಚಿ, ಕೊನೆಯಲ್ಲಿ ವಿಷಯ ಸೂಚಿಯನ್ನು ಕೊಟ್ಟು ಬಹುಮಟ್ಟಿಗೆ ಒಂದು ಪರಿಪೂರ್ಣ ಆಕರ ಗ್ರಂಥವಾಗಿಸಲು ಪ್ರಯತ್ನಿಸಿದ್ದಾರೆ. ಅವರ ಅನುವಾದದ ಬಗೆಗೆ ಆರ್.ಸಿ.ಹಿರೇಮಠರು "his has been a model translation. Looking to the magnitude of the work which they have done with perfection, I am proud to say that these translations will live long in the realm of literature"[೨೨]. ಎಂದು ಅಭಿಪ್ರಾಯಪಡುತ್ತಾರೆ.

೧೯೮೩ರಲ್ಲಿ ಬಸವ ಸಮಿತಿಯ ಮೂಲಕ ಮಾಸ್ತಿಯವರು ಸುಮಾರು ೫೦ ವರ್ಷದ ನಂತರ ಮತ್ತೊಮ್ಮೆ ಅದೇ ಶಿರೋನಾಮೆಯ ಅಡಿಯಲ್ಲಿ ಎಂದರೆ *Sayings of Basavanna* ವಚನಗಳನ್ನು ಇಂಗ್ಲಿಷ್‌ನಲ್ಲಿ ಅನುವಾದಿಸಿ ಕೊಡುತ್ತಾರೆ. ಆದರೆ ಮೊದಲು ಅನುವಾದಿಸಿದ ೧೦೧ ವಚನಗಳ ಜೊತೆಗೆ

೩೩೦ ವಚನಗಳನ್ನು ಹೆಚ್ಚಿಗೆ ಸೇರಿಸಿ, ಒಟ್ಟು ೪೩೧ ವಚನಗಳನ್ನು ಅನುವಾದಿಸಿದ್ದಲ್ಲದೆ, ೨೨೭ ಶೀರ್ಷಿಕೆಯಡಿಯಲ್ಲಿ ಅವುಗಳನ್ನು ವಿಂಗಡಿಸಿದ್ದಾರೆ.

೧೯೮೧ರಲ್ಲಿ ಡಿ.ಶೇಷಗಿರಿರಾವ ಅವರು ಅನುವಾದಿಸಿದ *At the Lord's Feet* ಕೃತಿಯಲ್ಲಿ ಅಕ್ಕನ ಆಯ್ದ ಕೆಲವು ವಚನಗಳ ಅನುವಾದವಾಗಿದ್ದು, ಬೆಂಗಳೂರಿನ ಪ್ರಜಾಪಿತ ಪ್ರಕಾಶನದಿಂದ ಪ್ರಕಟಗೊಂಡಿದೆ.

೧೯೮೩ರಲ್ಲಿ ಅಣ್ಣನ ಬಳಗ ಸಿರಿಗೆರೆಯವರು ಸರೋಜನಿಶಿಂತ್ರಿ ಯವರ *Akka Mahadevi* ಹೆಸರಿನ ಕೃತಿ ಪ್ರಕಟಿಸಿದ್ದಾರೆ. ಇದು ಅಕ್ಕಮಹಾದೇವಿಯ ಜೀವನ ಸಾಧನೆಗಳನ್ನು ಪರಿಚಯಿಸುವ ಕೃತಿಯಾಗಿದ್ದು, ಅನುಬಂಧದಲ್ಲಿ ಅಕ್ಕನ ೬೨ ವಚನಗಳನ್ನು ಅನುವಾದಿಸಿ ಕೊಡಲಾಗಿದೆ.

೧೯೮೪ರಲ್ಲಿ ದೆಹಲಿಯ ಮೋತಿಲಾಲ ಬನಾರಸಿದಾಸ್ ಪ್ರಕಾಶನದ ಮೂಲಕ, ನೆದರ್ಲ್ಯಾಂಡಿನ Kamil V.Zvelebil ಅವರು ಯುನೆಸ್ಕೋದ ಪ್ರಾಯೋಜಕತ್ವದಲ್ಲಿ *Lord of the Meeting Rivers:Devotional Poems of Basavanna* ಎಂಬ ಕೃತಿ ಹೊರತಂದಿದ್ದಾರೆ. ಅವರು ಬಸವಣ್ಣನವರ ೧೨೬ ವಚನಗಳನ್ನು ಅನುವಾದಿಸಿದ್ದು, ತಮಗೆ ಮೂಲ ಪ್ರೇರಣೆ ಎ.ಕೆ.ರಾಮಾನುಜನ ಎಂದು ಮುನ್ನುಡಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

"A.K.Ramanujan's lovely volume, *Speaking of Siva,* containing unsurpassed translations of the poems of four *vacanakaras,* was a source of constant joy and inspiration to me. Without this book my own transalations of Basava's vacanas would not have been conceived"[೨೩] ಕನ್ನಡ ಭಾಷೆ, ಸಂಸ್ಕೃತಿಯ ಪರಿಚಯದ ಕೊರತೆಯಿಂದಾಗಿ ಅಲ್ಲಲ್ಲಿ ಅನುವಾದ ಸಮರ್ಪಕವಾಗಿ ಬರದಿದ್ದರೂ ಒಟ್ಟಿನಲ್ಲಿ ಒಂದು ಯೋಗ್ಯ ಪ್ರಯತ್ನವೆನಿಸುತ್ತದೆ.ಆಶ್ಚರ್ಯವೆಂದರೆ Zvelebil ಅವರು ಲಿಂಗಾಯತ, ಶರಣ, ಷಟಸ್ಥಲ, ಮುಂತಾದ ವಿಚಾರಗಳನ್ನು ಹೆಚ್ಚು ಸ್ಪಷ್ಟವಾಗಿ ತಿಳಿಯಪಡಿಸುತ್ತಾರೆ. ಆದರೂ ಎ.ಕೆ.ರಾಮಾನುಜನ್‌ರ ಛಾಯೆ ಮತ್ತು ರಾಮಾನುಜನ್‌ರು ಅನುವಾದಿಸದ ವಚನಗಳಲ್ಲಿ ಮೆನೆಜಿಸ್-ಅಂಗಡಿಯವರ ಪ್ರಭಾವ ಎದ್ದು ಕಾಣಿಸುತ್ತದೆ.

೧೯೮೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಶ್ರೀ ಬಸವೇಶ್ವರಪೀಠದ ಆಶ್ರಯದಲ್ಲಿ ವೀರಶೈವ ಸಾಹಿತ್ಯದ ಅನುವಾದ ಮಾಲಿಕೆಯ ೩ನೆಯ ಪ್ರಕಟಣೆಯಾಗಿ ಸಿ.ಆರ್.ಯರವಿನತೆಲಿಮಠ ಅವರಿಂದ ಅನುವಾದಿತಗೊಂಡ *The Caste Eradication Vacanas of Sri Basaveshwara* ಕೃತಿಯನ್ನು ಹೊರತಂದಿತು. ಇದರಲ್ಲಿ ಜಾತಿ ನಿರ್ಮೂಲನಕ್ಕೆ ಸಂಬಂಧಿಸಿದ ಬಸವಣ್ಣನವರ ೬೨ ವಚನಗಳಿವೆ. ೧೯೮೮ರಲ್ಲಿ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ ಮೂರುಸಾವಿರಮಠ ಹುಬ್ಬಳ್ಳಿ ಇವರಿಂದ ಪ್ರಕಟಗೊಂಡಿರುವ ಎಸ್. ಅನಂತನಾರಾಯಣ ಅವರ *Thus Sang the Veerasaiva Mystics* ಮಾಲಿಕೆಯಲ್ಲಿ ಒಟ್ಟು ೫ ಸಂಚಿಕೆಗಳು ಬಂದಿವೆ. ಮೊದಲನೆಯದಾದ *Allamaprabhu* ೧೯೮೮ರಲ್ಲಿ, ಎರಡನೆಯದಾದ *Basavanna* ೧೯೮೮ರಲ್ಲಿ, ಮೂರನೆಯದಾದ *Akka Mahadevi*, ನಾಲ್ಕನೆಯದಾದ *Siddharama* ಮತ್ತು ಐದನೆಯದಾದ Channa Basavanna ೧೯೯೦ರಲ್ಲಿ ಕ್ರಮವಾಗಿ ಪ್ರಕಟಗೊಂಡವು. ಈ ಎಲ್ಲ ಕಿರು ಹೊತ್ತಿಗೆಗಳಲ್ಲಿ ಪ್ರತಿಯೊಬ್ಬ ಶರಣರ ಆಯ್ದ

೬೩ ವಚನಗಳು ಅನುವಾದಗೊಂಡಿವೆ. ಇಲ್ಲಿ ೬೩ ಎಂಬುದು ಲಿಂಗಾಯತ ಸಾಹಿತ್ಯ ಮತ್ತು ಇತಿಹಾಸದ ದೃಷ್ಟಿಯಿಂದ ಒಂದು ಅರ್ಥಪೂರ್ಣ ಸಂಖ್ಯೆಯೆಂಬುದನ್ನು ನೆನೆಯಬಹುದು.

ಅಮೇರಿಕೆಯಲ್ಲಿ ನೆಲೆಸಿದ ಭಾರತೀಯ ಸಮಾಜಶಾಸ್ತ್ರಜ್ಞ ಕೆ.ಈಶ್ವರನ್ (ಹಿರೇ ಮಲ್ಲೂರು ಈಶ್ವರನ್) ರವರು ೧೯೯೨ರಲ್ಲಿ ಕೊಲರ್‍ಯಾಡೊದ ವೆಸ್ಟ್ ವ್ಹಿವ್ ಪ್ರೆಸ್ಸಿನಿಂದ *Speaking of Basava, Lingayat Religion and Culture in South Asia* ಎನ್ನುವ ಶೀರ್ಷಿಕೆಯೊಂದಿಗೆ, ಬಸವಣ್ಣನವರ ೯೨, ಅಕ್ಕನ ೨೧, ಅಲ್ಲಮನ ೫೮, ಸಿದ್ಧರಾಮನ ೨೯, ಚನ್ನಬಸವಣ್ಣನ ೪೪ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸುತ್ತಾರೆ. ತಮ್ಮ ಕೃತಿಯ ಉದ್ದೇಶದ ಬಗೆಗೆ ಅವರು ಸಮರ್ಥಿಸಿಕೊಳ್ಳುತ್ತಾ, "the primary objective of this volume is to describe, analyse and interpret the life and work of one of the most illustrious sons of peninsular India south of the Vindhyas, who established an original religious system with its own distinctive social ideals,institutional infrastructure"[೨೫] ಎಂದು ಹೇಳಿದ್ದಾರೆ. ಸಮಾಜ ಶಾಸ್ತ್ರೀಯ ಅಧ್ಯಯನದ ಹಿನ್ನೆಲೆಯಲ್ಲಿ ೧೨ನೆಯ ಶತಮಾನದಿಂದ ಮೊದಲ್ಗೊಂಡು ಇವತ್ತಿನ ವರೆಗೆ ಲಿಂಗಾಯತಧರ್ಮದ ಆಚಾರ ವಿಚಾರಗಳ ಮೇಲೆ ಬೆಳಕು ಚಲ್ಲುತ್ತಾರೆ. ಇದರ ಮೇಲೆ ಎ.ಕೆ ರಾಮಾನುಜನ್‌ರವರ *Speaking of Siva* ದ ಪ್ರಭಾವ ಅಲ್ಲಲ್ಲಿ ಕಂಡು ಬಂದರೂ ಅವರ ಸೃಜನಶೀಲತೆಯನ್ನು ಚೆನ್ನಾಗಿ ಗುರುತಿಸಬಹುದಾಗಿದೆ. ರಾಮಾನುಜನ್‌ರ ನಂತರ ಅಮೇರಿಕೆಯಲ್ಲಿ ವಚನಸಾಹಿತ್ಯವನ್ನು ಹೆಚ್ಚು ಪ್ರಚುರಪಡಿಸುವಲ್ಲಿ ಇವರು ಮಹತ್ವದ ಕೆಲಸಮಾಡಿದ್ದಾರೆ. ಇವರು ತಮ್ಮ ಕೃತಿಯಲ್ಲಿ ದಕ್ಷಿಣ ಏಶಿಯಾದ ಲಿಂಗಾಯತಧರ್ಮ ಕುರಿತು ವಿವೇಚಿಸಿದ್ದು ಕೂಡ ಗಮನಾರ್ಹವಾಗಿದೆ.

ಜ್ಞಾನಯೋಗಾಶ್ರಮದ ಶ್ರೀ ಸಿದ್ಧೇಶ್ವರಸ್ವಾಮೀಜಿಯವರು ಮೈಸೂರಿನ ಸಂವಹನ ಪ್ರಕಾಶನದ ಮೂಲಕ ೧೯೯೨ರಲ್ಲಿ ಪ್ರಕಟಿಸಿದ *Basava's Thirst for Divine Grace* ನಲ್ಲಿ ೭೫ ವಚನಗಳನ್ನು ಅನುವಾದಿಸಿದ್ದಾರೆ. ಅದೇ ಕೃತಿಯು ೧೯೯೫ರಲ್ಲಿ *Devotional Sayings of Basaveshwara* ಹೆಸರಿನಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಮರುಮುದ್ರಣ ಕಂಡಿದೆ. ತಮ್ಮ ಪ್ರವಚನಗಳಿಂದ ಜನರ ಅಜ್ಞಾನವನ್ನು ಹಿಂಗಿಸುವ ಕೈಂಕರ್ಯವನ್ನು ಹೊತ್ತ ಸ್ವಾಮೀಜಿಯವರು ದೃಷ್ಟಾಂತಗಳ ಮೂಲಕ ಗದ್ಯರೂಪದಲ್ಲಿ ಶ್ರೀಸಾಮಾನ್ಯನಿಗೆ ತಿಳಿಯುವಹಾಗೆ ಅನುವಾದಿಸಿದ್ದು ಸಹಜವಾಗಿದೆ. ಮುನ್ನುಡಿಯಲ್ಲಿ ತಾವು ಆರಿಸಿದ ವಚನಗಳ ಬಗೆಗೆ "I have selected only those utterances,wherein his thirst for divine grace is expressed; and translated them. And these translations are not literal;they are mostly interpretative, enunciative, and many times descriptive.Nonetheless, I hope the spirit of the original verses is little disturbed"[೨೫]. ಎಂದು ಹೇಳಿದ್ದಾರೆ. ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು ಬಸವೇಶ್ವರರ ವಚನಗಳಲ್ಲಿ ಮಾಡಿರುವ ದೇವಕೃಪೆಗೆ ಒತ್ತು ಕೊಡುತ್ತ ತಾವು ಶಬ್ದಶಃ ಅನುವಾದಕ್ಕೆ ಯತ್ನಿಸಿಲ್ಲವೆಂದು ಸ್ಪಷ್ಟಪಡಿಸಿದ್ದಾರೆ. ಈ ಎರಡೂ ಕಿರು ಹೊತ್ತಿಗೆಗಳಿಗೆ ಜಗದ್ಗುರು ಶ್ರೀ

ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು ಮತ್ತು ಡಾ.ಕೆ.ಕೃಷ್ಣಮೂರ್ತಿಯವರು ಬರೆದ ಮುನ್ನುಡಿಗಳು ಅವುಗಳ ಘನತೆ ಹೆಚ್ಚಿಸಿವೆ.

೧೯೯೪ರಲ್ಲಿ ಸಿರಿಗೆರೆಯ ತರಳುಬಾಳು ಬೃಹನ್ಮಠದಿಂದ ಪ್ರಕಟವಾದ *Muffled Voices* ಎಂಬ ಕೃತಿಯಲ್ಲಿ ೧೨ನೆ ಶತಮಾನದ ಅ ಪ್ರಸಿದ್ಧ ಶರಣರ ವಚನಗಳನ್ನು, ಸರೋಜಿನಿ ಶಿಂತ್ರಿ, ಸಿ.ಆರ್.ಯರವಿನತೆಲಿಮಠ ಮತ್ತು ಜಿ.ಬಿ.ಸಜ್ಜನ ಅವರು ಅನುವಾದ ಮಾಡಿದ್ದಾರೆ. ಇಲ್ಲಿ ೩೨ ವಚನಕಾರರ ಜೀವನ ಮತ್ತು ಬರಹದ ಬಗ್ಗೆ ವಿವರವಾದ ಮಾಹಿತಿಯನ್ನು ನೀಡುತ್ತ ಅವರ ಒಟ್ಟು ೨೧೬ ವಚನಗಳನ್ನು ಅನುವಾದಿಸಿದ್ದಾರೆ. ಅಂಬಿಗರ ಚೌಡಯ್ಯ–೪೪, ಅರಿವಿನ ಮಾರಿತಂದೆ–೧೯, ಆಯ್ದಕ್ಕಿ ಲಕ್ಕಮ್ಮ–೧೩, ಬಹುರೂಪಿ ಚೌಡಯ್ಯ೧, ಬಿಬ್ಬಿ ಬಾಚಯ್ಯ–೧, ಜೇಡರ ದಾಸಿಮಯ್ಯ–೧೨, ಢಕ್ಕೆಯ ಬೊಮ್ಮಣ್ಣ–೮, ಡೋಹರ ಕಕ್ಕಯ್ಯ–೩, ಏಲೇಶ ಕೇತಯ್ಯ–೧, ಘಟ್ಟಿವಾಳಯ್ಯ–೧೦, ಹಡಪದ ಅಪ್ಪಣ್ಣ–೫, ಹಾವಿನಾಳ ಕಲ್ಲಯ್ಯ–೧, ಕದಿರೆ ರೆಮ್ಮವ್ವೆ೧, ಕಾಲಕೇತ ಬೊಮ್ಮಯ್ಯ–೧, ಕಾಳವ್ವೆ–೧೨, ಕನ್ನಡಿ ಕಾಯಕದ ಅಮ್ಮಿದೇವ–೨, ಕರುಳ ಕ್ಯಾತಯ್ಯ–೧, ಕಿನ್ನರಿ ಬ್ರಹ್ಮಯ್ಯ–೨, ಕೋಲ ಶಾಂತಯ್ಯ–೧೧, ಲಿಂಗಮ್ಮ–೧, ಮಡಿವಾಳ ಮಾಚಿದೇವ–೧೧, ಮಾದಾರ ಧೂಳಯ್ಯ–೧೦, ಮಾದಾರ ಚನ್ನಯ್ಯ–೧೦, ಮೇದಾರ ಕೇತಯ್ಯ–೨, ಮೆರೆಮಿಂಡದೇವ–೧೧, ನುಲಿಯಚಂದಯ್ಯ–೧, ಸತ್ತಿಗೆಯ ಮಾರಿತಂದೆ–೧, ಶಿವನಾಗಮಯ್ಯ೧, ಸೂಜಿ ಕಾಯಕದ ರಾಮಿತಂದೆ–೨, ೧–ಉರಿಲಿಂಗ ಪೆದ್ದಿ–೧೧, ವೇದಮೂರ್ತಿ ಸಂಗಣ್ಣ–೧, ವೀರ ಗೊಲ್ಲಾಳ–೨ ಹೀಗೆ ಒಟ್ಟು–೨೧೬ ವಚನಗಳು ಅನುವಾದಿತಗೊಂಡಿವೆ. ಸರೋಜಿನಿ ಶಿಂತ್ರಿ ಅವರು ವಚನಗಳ ಇಂಗ್ಲಿಷ್ ಅನುವಾದ ಕೈಕೊಂಡ ಪ್ರಥಮ ಮಹಿಳಾಲೇಖಕಿ ಎಂಬುದು ಗಮನೀಯವಾದುದು.

೧೯೯೫ರಲ್ಲಿ ಚಿತ್ರದುರ್ಗದ ಶ್ರೀ ಶಿವಮೂರ್ತಿ ಮುರುಘಾರಾಜೇಂದ್ರ ಮಹಾಸ್ವಾಮೀಜಿಯವರು *Reflections on Religion and Society* ಮತ್ತು *Towards Transformation* ಹೆಸರಿನ ಕೃತಿಗಳನ್ನು ಪ್ರಕಟಿಸಿದರು. ಇಲ್ಲಿಯ *Reflections on Religion and Society* ಕೃತಿಯು ಅವರು ಅಲ್ಲಲ್ಲಿ ನೀಡಿದ ಕನ್ನಡ ಉಪನ್ಯಾಸಗಳ ಇಂಗ್ಲಿಷ್ ಅನುವಾದವಾಗಿದೆ. *Towards Transformation* ಗ್ರಂಥವು ಅಭಿವೃದ್ಧಿಯ ಕಳಕಳಿಯಿಂದ ಸ್ವಾಮೀಜಿಯವರು ಕೈಕೊಂಡ ಯೋಜನೆಗಳ ಪರಿಚಯಾತ್ಮಕ ಕೃತಿಯಾಗಿದೆ. ಪ್ರಖ್ಯಾತ ಅನುವಾದಕಾರರಾದ ಪ್ರಧಾನ ಗುರುದತ್ತ ಅವರು ಈ ಎರಡು ಕೃತಿಗಳನ್ನು ಇಂಗ್ಲಿಷ್‌ಗೆ ಅನುವಾದಿಸುತ್ತ, ಸ್ವಾಮೀಜಿಯವರು ಸಂದರ್ಭಾನುಸಾರ ಉದ್ಧರಿಸಿದ ಬಸವಣ್ಣ, ಅಕ್ಕ ಮಹಾದೇವಿ, ಸಿದ್ಧರಾಮ, ಅಲ್ಲಮಪ್ರಭು ಇವರ ವಚನಗಳನ್ನೂ ಅನುವಾದಿಸಿದ್ದಾರೆ.

೧೯೯೬ರಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟಗೊಂಡ *Vacanas of Devara Dasimayya* ಕೃತಿಯು ಆದ್ಯ ವಚನಕಾರನಾದ ದೇವರ ದಾಸಿಮಯ್ಯನ ೧೫೬ ವಚನಗಳ ಇಂಗ್ಲಿಷ್ ಅನುವಾದವನ್ನೊಳಗೊಂಡಿದೆ. ಅನುವಾದಕರಾದ ಚಂದ್ರಶೇಖರಯ್ಯನವರು ೨೨ ಪುಟಗಳ ಸುದೀರ್ಘ ಮುನ್ನುಡಿಯಲ್ಲಿ ದಾಸಿಮಯ್ಯನ ಬಗ್ಗೆ ಸೊಗಸಾದ ಪರಿಚಯ ನೀಡಿದ್ದಾರೆ.

೧೯೯೬ರಲ್ಲಿ Vijaya Ramaswamy ಅವರ *Divinity and Deviance, Women in Veerashaivism* ಎಂಬ ಕೃತಿ ಪ್ರಕಟವಾಯಿತು. ಇದು ಮಹಿಳಾ ವಚನಕಾರ್ತಿಯರ ವಚನಗಳ ಬಗೆಗೆ

ಬಂದ ಸಂಶೋಧನಾತ್ಮಕ ಪ್ರಬಂಧದ ಪುಸ್ತಕವಾಗಿದೆ. ಇದರಲ್ಲಿ ಎ.ಕೆ.ರಾಮಾನುಜನ್, ಕೆ.ಈಶ್ವರನ್, ವ್ಹೆಲೆಬಿಲ್, ಮೆನೆಜಿಸ್ ಮತ್ತು ಭೂಸನೂರಮಠ ಅವರ ವಚನಗಳ ಅನುವಾದಗಳನ್ನು ಸಂದರ್ಭಕ್ಕನುಸಾರವಾಗಿ ಮತ್ತು ವ್ಯಾಪಕವಾಗಿ ಬಳಸುವುದಲ್ಲದೆ ಶಿವಶರಣೆಯರ ೭೬ ವಚನಗಳನ್ನು ವಿಜಯಾ ರಾಮಸ್ವಾಮಿ ಅವರು ತಾವೇ ಅನುವಾದಮಾಡಿದ್ದಾರೆ.

೧೯೯೮ರಲ್ಲಿ ವಿಜಾಪುರದ ಶ್ರೀ ಸಿದ್ಧೇಶ್ವರಸಂಸ್ಥೆಯು *Commentaries on selected Vachanas of Siddharameshwara* ಕೃತಿ ಪ್ರಕಟಿಸಿತು. ಇದರಲ್ಲಿ ೨೧ ಆಯ್ದ ವಚನಗಳನ್ನು ಕುರಿತು ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರು ಕನ್ನಡದಲ್ಲಿ ಬರೆದ 'ಸಿದ್ಧರಾಮೇಶ್ವರ ವಚನ ಪ್ರವಚನ'ವನ್ನು ಜಿ.ಬಿ.ಸಜ್ಜನ ಅವರು ಇಂಗ್ಲಿಷ್‌ಗೆ ಅನುವಾದಮಾಡಿದ್ದಾರೆ.

೨೦೦೧ರಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ *Naming The Nameless* ಎಂಬ ಕೃತಿಯನ್ನು ಪ್ರಕಟಿಸಿತು. ಅದನ್ನು ಪ್ರಭುಶಂಕರ ಮತ್ತು ದಕ್ಷಿಣ ಅಮೇರಿಕೆಯ ವೆನೆಝುಲ್ಲಾದ ರೊವೆನಾ ಹಿಲ್ಲ ಅವರು ಅನುವಾದಿಸಿದ್ದಾರೆ. ಇದು ಪ್ರಭುಶಂಕರ ಅವರ 'ಶರಣರ ನೂರೊಂದು ವಚನಗಳು'ಎಂಬ ಕನ್ನಡ ಕೃತಿಯ ಇಂಗ್ಲಿಷ್ ಅವತರಣಿಕೆಯಾಗಿದೆ. ಇದರಲ್ಲಿ ಅಕ್ಕನ ೨೭, ಅಲ್ಲಮಪ್ರಭುವಿನ ೨೭, ಬಸವಣ್ಣನ ೨೬ ಮತ್ತು ಇತರ ವಚನಕಾರರ ೨೧ ವಚನಗಳಿವೆ. Rowena Hill ಅವರು ಇವೇ ವಚನಗಳನ್ನು ಸ್ಪ್ಯಾನಿಷನಲ್ಲೂ ಅನುವಾದಿಸಿದ್ದಾರೆ. ಇದು ಹಿಂದಿ, ಬೆಂಗಾಲಿ, ಓರಿಯಾ, ಮಲಯಾಳಮ್ ಮತ್ತು ಪಂಜಾಬಿ ಭಾಷೆಗಳಿಗೆ ಅನುವಾದಗೊಂಡಿದೆ ಎಂದು ಮುನ್ನುಡಿಯಲ್ಲಿ ಪ್ರಭುಶಂಕರ ಅವರು ತಿಳಿಸುತ್ತಾರೆ. ಹಾಗಾಗಿ ಈ ಕೃತಿ ಹಲವು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿರುವುದೊಂದು ವಿಶೇಷ ಎನಿಸುತ್ತದೆ.

೨೦೦೧ರಲ್ಲಿ ಜ್ಞಾನಯೋಗಾಶ್ರಮ ವಿಜಾಪುರದಿಂದ ಪ್ರಕಟವಾದ *God World and Soul: Reflections on Saintly Saying* ಎಂಬ ಕೃತಿಯಲ್ಲಿ ಶ್ರೀಸಿದ್ಧೇಶ್ವರ ಸ್ವಾಮೀಜಿಯವರು ಜೇಡರ ದಾಸಿಮಯ್ಯ–೯, ಚನ್ನಬಸವಣ್ಣ–೪, ಬಸವಣ್ಣ–೬, ಅಲ್ಲಮಪ್ರಭು–೧೫, ಷಣ್ಮುಖ ಸ್ವಾಮಿ–೧೦, ಆದಯ್ಯ೩, ಘಟ್ಟಿವಾಳಯ್ಯ–೨, ಅಕ್ಕಮಹಾದೇವಿ–೨, ಕಾಡ ಸಿದ್ಧೇಶ್ವರ–೧, ಸಿದ್ಧರಾಮ–೮, ಅಂಬಿಗರ ಚೌಡಯ್ಯ೨, ಸ್ವತಂತ್ರ ಸಿದ್ಧಲಿಂಗೇಶ್ವರ–೭, ಬೊಂತಾದೇವಿ–೧, ಬಿಬ್ಬಿ ಬಾಚಯ್ಯ–೧, ಮಡಿವಾಳ ಮಾಚಿದೇವ–೧, ಸತ್ಯಕ್ಕ–೧, ಚಂದಿ ಮರಸ–೩, ಸಕಲೇಶ ಮಾದರಸ–೧, ಉರಿಲಿಂಗ ಪೆದ್ದಿ–೨, ತುರುಗಾಹಿ ರಾಮಣ್ಣ೧, ಗಣದಾಸಿ ವೀರಣ್ಣ–೧, ಮೆರೆಮಿಂಡದೇವ–೧, ತೋಂಟದ ಸಿದ್ಧಲಿಂಗ ಯತಿ–೧, ಹೀಗೆ ಒಟ್ಟು ೮೧ ವಚನಗಳನ್ನು ಕನ್ನಡದಲ್ಲಿ ಕೊಡುವುದರ ಜೊತೆಗೆ ಅವುಗಳನ್ನು ತಿಳಿ ಗದ್ಯದಲ್ಲಿ ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಪ್ರಾಚೀನ ಅನುಭಾವ ಸಾಹಿತ್ಯವನ್ನು ಆಧುನಿಕ ಅನುಭಾವಿಯೊಬ್ಬರು ಸಮರ್ಪಕವಾಗಿ ಈ ಕೃತಿಯಲ್ಲಿ ನೀಡಿದ್ದಾರೆ.

೨೦೦೧ರಲ್ಲಿ ಬೆಂಗಳೂರಿನ ವಿಶ್ವಕಲ್ಯಾಣ ಮಿಷನ್ *Gems of Basaveshwara* ಎಂಬ ಕೃತಿಯನ್ನು ಪ್ರಕಟಿಸಿದೆ. ಇದನ್ನು ಬೆಲ್ಜಿಯಮ್ ದೇಶದ Jean Letschert (Ascharyacharya) ಅವರು ಮಾತೆ ಮಹಾದೇವಿ ಅವರೊಂದಿಗೆ ಅನುವಾದಿಸಿದ್ದಾರೆ. ಇದರಲ್ಲಿ ೩೨ ವಚನಗಳ ಕನ್ನಡ ಪಠ್ಯದೊಂದಿಗೆ

ಇಂಗಿಷ್‌ನಲ್ಲಿ ಲಿಪ್ಯಂತರ ಕೊಟ್ಟು, ಅನುವಾದಿಸಿ ನಂತರ ಇಂಗ್ಲಿಷ್‌ನಲ್ಲಿ ವಿವರಣೆ ಕೊಟ್ಟಿದ್ದಾರೆ. ವಚನಾಂಕಿತವನ್ನು 'ಕೂಡಲ ಸಂಗಮದೇವ'ದ ಬದಲು 'ಲಿಂಗದೇವ' ಎಂದು ಬದಲಾಯಿಸಿದ್ದಾರೆ. ಇದು ನಂತರ ಸಾಹಿತ್ಯ ವಲಯದಲ್ಲಿ ವಾದ-ವಿವಾದಕ್ಕೆ ಕಾರಣವಾಯಿತು. ಅಂಕಿತ ಬದಲಾವಣೆಯನ್ನು ಯಾವ ಪ್ರಾಜ್ಞರೂ ಒಪ್ಪುವಂತಿಲ್ಲ.

೨೦೦೧ರಲ್ಲಿ ಮೈಸೂರಿನ ಸುತ್ತೂರುಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಶಿವಗಣಪ್ರಸಾದಿ ಮಹಾದೇವಯ್ಯನ *Shoonya Sampadane Volume no-I* ಮತ್ತು ೨೦೦೩ ರಲ್ಲಿ *Shoonya Sampadane Volume no-II*ನ್ನು ಸಂಕ್ಷೇಪಿಸಿ ಡಿ.ಎ.ಶಂಕರ ಅನುವಾದ ಮಾಡಿರುತ್ತಾರೆ. ಮೊದಲನೆಯ ಸಂಪುಟದಲ್ಲಿ ಪ್ರಭುದೇವ, ಅನಿಮಿಷದೇವ, ಮುಕ್ತಾಯಕ್ಕ, ಸಿದ್ಧರಾಮ,ಬಸವರಾಜದೇವ ಮತ್ತು ಮರುಳ ಶಂಕರದೇವರ ಸಂಪಾದನೆಗಳು ಮೂಡಿಬಂದಿವೆ. ಎರಡನೆಯ ಸಂಪುಟದಲ್ಲಿ ಚನ್ನಬಸವನ ಸಂಪಾದನೆ, ಮಹಾದೇವಿಯಕ್ಕನ ಸಂಪಾದನೆ, ಪ್ರಭುದೇವರ ನಿರ್ಗಮನ, ಪ್ರಭುದೇವರ ಮರು ಆಗಮನ ಮತ್ತು ಸಿಂಹಾಸನಾರೋಹಣಗಳಿದ್ದು ಈ ಎಲ್ಲ ಅಧ್ಯಾಯಗಳಲ್ಲಿ ಬರುವ ವಚನಗಳನ್ನು ಅನುವಾದಮಾಡಿದ್ದಾರೆ. ವಚನಗಳ ಅರ್ಥ, ಆಶಯಗಳಿಗೆ ಭಂಗ ಬಾರದಂತೆ ಅನುವಾದಕರು ಕುಶಲತೆಯಿಂದ ಅನುವಾದ ಕಾರ್ಯ ಪೂರೈಸಿದ್ದಾರೆ.

೨೦೦೩ರಲ್ಲಿ ಬೆಂಗಳೂರಿನ ಬಸವ ಸಮಿತಿಯು *Allamaprabhu, His Life and Message* ಪ್ರಕಟಪಡಿಸಿತು. ಅದರಲ್ಲಿ ಬಿ.ವಿರುಪಾಕ್ಷಪ್ಪನವರು ಅಲ್ಲಮಪ್ರಭುವಿನ ಜೀವನದ ಬಗ್ಗೆ ಬರೆದು, ಅವನ ೧೦೮ ವಚನಗಳನ್ನು ಇಂಗ್ಲಿಷ್‌ಗೆ ಸರಳವಾಗಿ ಅನುವಾದ ಮಾಡಿದ್ದಾರೆ. ೨೦೦೫ರಲ್ಲಿ ಗದುಗಿನ ತೋಂಟದಾರ್ಯಮಠದ ಲಿಂಗಾಯತ ಅಧ್ಯಯನ ಸಂಸ್ಥೆಯು ಬಸವರಾಜ ಮೂರುಶಿಳ್ಳಿನವರ *Select Vacanas of Basavanna* ಎಂಬ ಕೃತಿಯನ್ನು ಹೊರತಂದಿದೆ. ಇದರಲ್ಲಿ ೧೫೮ ವಚನಗಳ ಅನುವಾದವಿದ್ದು, ಈ ವರೆಗೆ ಹೆಚ್ಚಾಗಿ ಅನುವಾದವಾಗದ ಕ್ಲಿಷ್ಟವಚನಗಳನ್ನು ಇಲ್ಲಿ ಆಯ್ದುಕೊಂಡಿದ್ದು ವಿಶೇಷ. ಮೊದಲು ಕನ್ನಡ ಮೂಲ ವಚನಗಳನ್ನು ನೀಡಿ, ನಂತರ ಇಂಗ್ಲಿಷ್ ಅನುವಾದವನ್ನು ನೀಡಲಾಗಿದೆ. ೨೦೦೫ರಲ್ಲಿ ಬಸವ ಸಮಿತಿ ಬೆಂಗಳೂರಿನಿಂದ ಬಿ.ವಿರುಪಾಕ್ಷಪ್ಪನವರ ಎರಡು ಪುಸ್ತಕಗಳು ಪ್ರಕಟಗೊಂಡವು. *108 Selected Vachans of Basavanna* ಮತ್ತು *Basavanna the Light of the World* ಗಳಲ್ಲಿ ಕ್ರಮವಾಗಿ ೧೦೮ ಮತ್ತು ೫೬ ವಚನಗಳು ಅನುವಾದ ಕಂಡವು. ಮೊದಲನೆಯ ಕೃತಿಯಲ್ಲಿ ಕೇವಲ ವಚನಗಳ ಅನುವಾದವಿದ್ದರೆ, ಎರಡನೆಯ ಕೃತಿಯಲ್ಲಿ ಬಸವಣ್ಣನವರ ಜೀವನಚರಿತ್ರೆಯನ್ನು ನೀಡಿ ೫೬ ವಚನಗಳನ್ನು ಅನುವಾದಿಸಿಕೊಡಲಾಗಿದೆ.

ಬೆಂಗಳೂರಿನ ಬಸವ ಸಮಿತಿ ೨೦೦೫ರಲ್ಲಿ *Selected Vachans of Saranas* ಎಂಬ ಕೃತಿ ಪ್ರಕಟಿಸಿದ್ದು, ಎಚ್.ಎಸ್.ಶಿವಪ್ರಕಾಶ ಮತ್ತು ಓ.ಎಲ್. ನಾಗಭೂಷಣಸ್ವಾಮಿಯವರ ಸಂಪಾದಕತ್ವದಲ್ಲಿ ಐದು ಜನ ಅನುವಾದಕಾರರು ೧೯೩ ವಚನಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಈ ಕೃತಿಯು ಲಕ್ಷ್ಮೀ ಚಂದ್ರಶೇಖರ, ವಿಜಯಾ ಗುತ್ತಲ, ಚೆನ್ನೇಗೌಡ, ವಿನಯಾ ಚೈತನ್ಯ ಹಾಗು ಪ್ರದೀಪಕುಮಾರ ಅವರು ಅನುವಾದ ಕಮ್ಮಟದಲ್ಲಿ ಭಾಗಿಯಾಗಿ, ಒಂದು ಕಾಲಮಿತಿಯಲ್ಲಿ ಅನುವಾದವನ್ನು ಮಾಡಿದ ಕಾರಣ

ಅನುವಾದದಲ್ಲಿ ಹಲವು ಇತಿಮಿತಿಗಳು ಕಾಣಬರುತ್ತವೆ. ಶರಣರ ತತ್ವ ಮತ್ತು ಧೋರಣೆಗಳನ್ನು ಗ್ರಹಿಸುವಲ್ಲಿ ಕೆಲವು ಅನುವಾದಕರು ಯಶಸ್ವಿಯಾಗಿಲ್ಲ. ಅಕ್ಕ ಮಹಾದೇವಿ-೧೯, ಅಕ್ಕಮ್ಮ-೧, ಅಲ್ಲಮ ಪ್ರಭು-೩೮, ಅಮುಗೆ ರಾಯಮ್ಮ-೨, ಆಯ್ದಕ್ಕಿ ಲಕ್ಕಮ್ಮ-೫, ಆಯ್ದಕ್ಕಿ ಮಾರಯ್ಯ-೧, ಬಸವಣ್ಣ-೯೩, ಚನ್ನಬಸವಣ್ಣ೪, ಗಜೇಶ ಮಸಣಯ್ಯ-೧, ಗೊಗ್ಗವ್ವೆ-೧, ಹಡಪದ ಲಿಂಗಮ್ಮ-೨, ಜೇಡರ ದಾಸಿಮಯ್ಯ-೯, ಮೋಳಿಗೆ ಮಹಾ  ದೇವಿ-೧, ಮುಕ್ತಾಯಕ್ಕ-೨ ನೀಲಮ್ಮ-೧, ಸತ್ಯಕ್ಕ-೨, ಸಿದ್ಧರಾಮ-೯ ವಚನಗಳನ್ನು ಇಲ್ಲಿ ಅವರು  ಅನುವಾದಮಾಡಿದ್ದಾರೆ.

೨೦೦೬ರಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಡಿ.ಎ.ಶಂಕರ ಅವರ *Forever Saints: Selected Vacanas of Basavanna,Allama Prabhu, and Akka Mahadevi* ಎಂಬ ಕೃತಿ ಪ್ರಕಟವಾಯಿತು. ಬಸವಣ್ಣನ-೧೪೧ ಅಲ್ಲಮನ-೧೧೮ ಮತ್ತು ಅಕ್ಕ ಮಹಾದೇವಿಯ-೭೧ ಹೀಗೆ ಒಟ್ಟು ೩೩೦ ವಚನಗಳನ್ನು ಅವರು ಅನುವಾದಿಸಿದ್ದಾರೆ. ತಮ್ಮ ಅನುವಾದವನ್ನು ಕುರಿತು  "One of the chief purposes with which I have selected and translated the *vachanas*  here is to make this rich and very human document of great socio-literary value available primarily to the non-kannada speaking world"[೨೬] ಎಂದು ಅನುವಾದದ  ಆಶಯವನ್ನು  ಎತ್ತಿ  ಹೇಳಿದ್ದಾರೆ.

ಸಿ.ಆರ್.ಯರವಿನತೆಲಿಮಠ ಅವರು ಕನ್ನಡ ಸಂಸ್ಕೃತಿ ಇಲಾಖೆಯ ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿಯ ಸಂಪುಟ (ಶಿವಶರಣೆಯರ ವಚನ ಸಂಪುಟ)ವನ್ನು *Vacanas of Women Saints* ಹೆಸರಿನಿಂದ ಸಮಗ್ರವಾಗಿ ಅನುವಾದಿಸಿ ೨೦೦೬ರಲ್ಲಿ ಬಸವ ಸಮಿತಿಯ ಮೂಲಕ ಪ್ರಕಟಿಸಿದ್ದಾರೆ. ಇದರಲ್ಲಿ ಅಕ್ಕ ಮಹಾದೇವಿ-೩೫೪, ಅಕ್ಕಮ್ಮನ-೧೫೩, ಅಮುಗೆ ರಾಯಮ್ಮ-೧೧೫, ಆಯ್ದಕ್ಕಿ ಲಕ್ಕಮ್ಮ೨೫, ಕಾಳವ್ವೆ-೧೩ ಮಸಣಮ್ಮ-೧, ಕದಿರ ಕಾಯಕದ ಕಾಳವ್ವೆ-೧, ಕದಿರ ರಾಮವ್ವೆ೪, ಕನ್ನಡಿ ಕಾಯಕದ ರೇವಮ್ಮ-೧, ರೇಚವ್ವೆ-೧, ಕಾಲಕಣ್ಣಿಯ ಕಾಮ-೧, ಲಕ್ಷ್ಮಮ್ಮ-೧, ಕೊಟ್ಟಣದ ಸೋಮ-೧, ಗಂಗಾಂಬಿಕೆ೯, ಗಜೇಶ ಮಸಣಯ್ಯ ಪುಣ್ಯಸ್ತ್ರೀ-೯, ಕೇತಲದೇವಿಯ-೨, ಗೊಗ್ಗವ್ವೆ-೬, ವೀರಮ್ಮ-೫, ದುಗ್ಗಳೆ-೨, ನಾಗಲಾಂಬಿಕೆ-೧೫, ನೀಲಮ್ಮ-೧೨, ಗುಡ್ಡವ್ವೆ-೧, ಬಾಚಿಕಾಯಕದ ಬಸವಯ್ಯ ಪುಣ್ಯಸ್ತ್ರೀ ಕಾಳವ್ವೆ-೨, ಬೊಂತಾದೇವಿ-೫, ಮುಕ್ತಾಯಕ್ಕ-೩೭, ಮೋಳಿಗೆ ಮಹಾದೇವಿ-೬೯, ರಾಯಮ್ಮ೧, ರೇಕಮ್ಮ-೧, ಸತ್ಯಕ್ಕ-೨೯ ಸಿದ್ಧ ಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ-೧, ಸೂಳೆ ಸಂಕವ್ವೆ-೧, ಹಡಪದ ಲಿಂಗಮ್ಮ-೧೧೩, ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ-೧, ಹೀಗೆ ೩೩ ವಚನಕಾರ್ತಿಯರ ಒಟ್ಟು ೧೧೦೪ ವಚನಗಳನ್ನು ಅನುವಾದಮಾಡಿದ್ದಾರೆ. ವಚನಕಾರ್ತಿಯರ ಇಷ್ಟು ವಚನಗಳು ಮೊದಲ ಸಲ ಇಂಗ್ಲಿಷ್‌ಗೆ ಅನುವಾದಗೊಂಡು ಪ್ರಕಟಿತವಾಗಿರುವ ದೊಡ್ಡ ಸಂಪುಟವಿದು ಇದಕ್ಕೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ.

ಸಿದ್ದಯ್ಯ ಪುರಾಣಿಕ ಅವರ 'ಅಕ್ಕ ಮಹಾದೇವಿ' ಕನ್ನಡ ಕೃತಿಯನ್ನು ಜಿ.ಬಿ.ಸಜ್ಜನ ಅವರು ಇಂಗ್ಲಿಷ್‌ಗೆ ಅನುವಾದ ಮಾಡಿದ್ದರು. ಇದರ ಅಕ್ಕನ ೩೫ ವಚನಗಳನ್ನು ಎತ್ತಿಕೊಂಡು, ಡೋಣೂರ್‌ಮಠ ಅನುವಾದಿಸಿದ

ಬಸವಣ್ಣನ ೩೨ ವಚನಗಳನ್ನು ಜೋಡಿಸಿ ೨೦೦೬ರಲ್ಲಿ, ಜಿ.ಬಿ.ಸಜ್ಜನ ಮತ್ತು ಬಸವರಾಜ ಡೋಣೂರಮಠ *Encounter with Divinity* ಹೆಸರಿನಿಂದ ಪ್ರಕಟಿಸುತ್ತಾರೆ. ಜಿ.ಬಿ.ಸಜ್ಜನ ಅವರು ಈ ಅನುವಾದದ ಪ್ರಸ್ತುತತೆಯನ್ನು ಕುರಿತು, "We are aware of the fact that ours is not a pioneering effort in translation.Stalwarts have,before us, turned their hand to this evangelical work of spreading the sweetness and light available in one language to others"[೨೮] ಎಂದು ಪ್ರಾಮಾಣಿಕವಾಗಿ ಹೇಳಿದುದನ್ನು ಗಮನಿಸಬಹುದು.

೨೦೦೬ರಲ್ಲಿ ಬಸವ ಸಮಿತಿ ಬೆಂಗಳೂರಿನಿಂದ ಲೀಲಾವತಿ ಪ್ರಸಾದ ಅವರ ಸಂಪಾದಕತ್ವದಲ್ಲಿ ವಿಜಯಾ ಸುಬ್ಬರಾಜ ಅವರು *108 Selected Vachanas of Akkamahadevi* ಎಂಬ ಕೃತಿಯನ್ನು ಪ್ರಕಟಿಸಿದರು. ಅದೇ ವರ್ಷ ಬಸವ ಸಮಿತಿ ಜಿ.ವ್ಹಿ.ಜಯಾರಾಜಶೇಖರ ಅವರು ಆಯ್ಕೆಮಾಡಿದ ಅಕ್ಕ ಮಹಾದೇವಿಯ ವಚನಗಳನ್ನು ವಿಜಯಾ ಸುಬ್ಬರಾಜ ಅವರು ಇಂಗ್ಲಿಷ್‌ಗೆ *Akkamahadevi* ಹೆಸರಿನಿಂದ ಅನುವಾದಿಸಿದರು. ಮಕ್ಕಳಿಗಾಗಿ ಪ್ರಕಟಿಸಿದ ಶರಣ ಕಥಾಮಂಜರಿ ಮಾಲಿಕೆಯ ಅಕ್ಕನ ಜೀವನ ಚರಿತ್ರೆಯ ಜೊತೆಗೆ ೫೨ ವಚನಗಳನ್ನು ಅನುವಾದಿಸಿದ್ದು ವಿಶೇಷವಾಗಿದೆ.

೨೦೦೭ರಲ್ಲಿ ಬಸರೂರು ಸುಬ್ಬರಾವ್ ಬೆಂಗಳೂರಿನ ಮಂಗೇಶ ಪ್ರಕಾಶನದಡಿ *Allama Prabhu: A study in philosophy with translation of poems*, ಶೀರ್ಷಿಕೆಯ ಕೃತಿ ಪ್ರಕಟಿಸಿದ್ದಾರೆ. ಅಲ್ಲಮನ ೨೨೨, ಬಸವಣ್ಣನ ೨೨ ಮತ್ತು ಇನ್ನುಳಿದ ಶರಣರ ೩೬ ವಚನಗಳನ್ನು ಅವರು ಅನುವಾದಿಸಿದ್ದಾರೆ. ಅಲ್ಲಮನ ವಚನವೊಂದನ್ನು ತೆಗೆದುಕೊಂಡು, ಉಳಿದ ಶರಣರು ಆ ವಿಷಯಕ್ಕೆ ಹೇಗೆ ಸ್ಪಂದಿಸುತ್ತಾರೆಂಬ ತುಲನಾತ್ಮಕ ವಿಶ್ಲೇಷಣೆ ಇಲ್ಲಿರುವುದು ಗಮನಾರ್ಹವಾಗಿದೆ. ಇಲ್ಲಿರುವ ಬಸವಣ್ಣನ ೨೨ ವಚನಗಳಲ್ಲಿ ೧೬ ವಚನಗಳು ಷಟಸ್ಥಲದವುಗಳಾದರೆ, ೬ ವಚನಗಳು ಹೆಚ್ಚಿನ ವಚನಗಳ ಅನುವಾದಗಳಾಗಿವೆ.

೨೦೦೭ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅನುವಾದ ವಿಭಾಗದಿಂದ Classical Kannada Texts in Translation Seriesನಲ್ಲಿ. *The Sign: Vachanas of 12th Century,* ಓ.ಎಲ್. ನಾಗಭೂಷಣಸ್ವಾಮಿಯವರ ಸಂಪಾದಕತ್ವದಲ್ಲಿ ಹೆಸರಿನ ಕೃತಿ ಪ್ರಕಟವಾಗಿದೆ. ಇದರಲ್ಲಿ ೬೦ ವಚನಕಾರರ ೪೬೮ ವಚನಗಳಿದ್ದು ಓ.ಎಲ್.ನಾಗಭೂಷಣಸ್ವಾಮಿ, ಲಕ್ಷ್ಮೀ ಚಂದ್ರಶೇಖರ ಮತ್ತು ವಿಜಯಾ ಗುತ್ತಲ ಅವರು ಅನುವಾದಿಸಿದ್ದಾರೆ. ಆದಯ್ಯ–೨, ಅಕ್ಕ ಮಹಾದೇವಿ–೭೮, ಅಲ್ಲಮ ಪ್ರಭು–೧೦೦, ಅಂಬಿಗರ ಚೌಡಯ್ಯನ೧೫, ಅಮುಗೆ ರಾಯಮ್ಮ–೪, ಅಂಗಸೊಂಕಿನ ಲಿಂಗತಂದೆ–೧, ಅರಿವಿನ ಮಾರಿತಂದೆ–೫, ಆಯ್ದಕ್ಕಿ ಲಕ್ಕಮ್ಮ೨, ಆಯ್ದಕ್ಕಿ ಮಾರಯ್ಯ–೧, ಬಹುರೂಪಿ ಚೌಡಯ್ಯ–೩, ಬಾಲ ಬೊಮ್ಮಣ್ಣ–೧, ಬಸವಣ್ಣ–೧೦೩, ಭಿಕಾರಿಭೀಮಯ್ಯ–೧, ಭೋಗಣ್ಣ–೧, ಬಿಬ್ಬಿ ಬಾಚಯ್ಯ–೩, ಚಂದಿಮರಸ೨, ಚನ್ನಬಸವಣ್ಣ–೧೧, ಢಕ್ಕೆಯ ಬೊಮ್ಮಣ್ಣ–೧, ಡೋಹರ ಕಕ್ಕಯ್ಯ–೧, ಗಜೇಶ ಮಸಣಯ್ಯ–೧೦, ಗೊಗ್ಗವ್ವೆ–೧, ಘಟ್ಟಿವಾಳಯ್ಯ೧, ಹಡಪದ ಅಪ್ಪಣ್ಣ–೧, ಹಡಪದ ಅಪ್ಪಣ್ಣ ಪುಣ್ಯಸ್ತ್ರೀ–೨, ಹಾವಿನಾಳ ಕಲ್ಲಯ್ಯ–೧,ಹೊಡೆಹುಲ್ಲ ಬಂಕಣ್ಣ೧, ಜೇಡರ ದಾಸಿಮಯ್ಯ–೨೧, ಕದಿರ ರಾಮವ್ವೆ–೨, ಕೀಲಾರದ

ಭೀಮಣ್ಣ–೧, ಕೊಟ್ಟಣದ ಸೋಮವ್ವೆ೧, ಕೂಗಿನ ಮಾರಯ್ಯ–೧, ಮಾದರ ಚನ್ನಯ್ಯ–೧, ಮಾದರ ಧೂಳಯ್ಯ–೩, ಮಧುವಯ್ಯ–೧, ಮಡಿವಾಳ ಮಾಚಿದೇವ–೨, ಮೈದುನ ರಾಮಯ್ಯ–೧, ಮಾರೇಶ್ವರೊಡೆಯ೧, ಮೆರೆಮಿಂಡಯ್ಯ–೩, ಮೋಳಿಗೆ ಮಾರಯ್ಯ–೧೦, ಮುಕ್ತಾಯಕ್ಕ–೪, ನಗೆಯ ಮಾರಿತಂದೆ–೧, ನೀಲಮ್ಮ೩,ನುಲಿಯ ಚಂದಯ್ಯ–೧, ಪ್ರಸಾದಿ ಭೋಗಣ್ಣ–೧, ರಾಯಸದ ಮಂಚಣ್ಣ–೧, ಸಗರದ ಬೊಮ್ಮಣ್ಣ–೨, ಸಕಲೇಶ ಮಾದರಸ–೧೦, ಸಂಗಮೇಶ್ವರ ಅಪ್ಪಣ್ಣ–೨, ಸತ್ಯಕ್ಕ–೧, ಶಿವಲೆಂಕ ಮಂಚಣ್ಣ೧, ಸಿದ್ಧರಾಮ–೧೦, ಸೊಡ್ಡಳ ಬಾಚರಸ೩, ಸೂಳೆ ಸಂಕವ್ವೆ–೧, ಸುಂಕದ ಬಂಕಣ್ಣ–೧, ತುರುಗಾಹಿ ರಾಮಣ್ಣ–೩, ಉರಿಲಿಂಗದೇವ–೫, ಉರಿಲಿಂಗ ಪೆದ್ದಿ–೨, ಉರಿಲಿಂಗ ಪೆದ್ದಿಯ ಪುಣ್ಯಸ್ತ್ರೀ ಕಾಳವ್ವೆ೧, ವಚನ ಭಾಂಡಾರಿ ಶಾಂತರಸ–೩, ವೀರಗೊಲ್ಲಾಳ೨, ಹೀಗೆ ಒಟ್ಟು ೪೬೮ ವಚನಗಳನ್ನು ಅನುವಾದಿಸಿದ್ದಾರೆ. ಸಂಪಾದಕರು ಸುದೀರ್ಘ ಮುನ್ನುಡಿ ಬರೆದುದು ಕಡಿಮೆ ಪ್ರಚಾರದಲ್ಲಿರುವ ವಚನಕಾರರನ್ನು ಅನುವಾದಿಸಿದುದು ಹೆಮ್ಮೆಯ ಸಂಗತಿಯಾಗಿದೆ.

ನ್ಯೂಜಿಲ್ಯಾಂಡನ ಆಕ್ಲಂಡದಲ್ಲಿರುವ ಶ್ರೀಮತಿ ಉಷಾ ಪಾಲಾಕ್ಷಪ್ಪ ಅವರು *108 Gems of Basaveshwara Vacanas* ಎಂಬ ಕೃತಿಯನ್ನು ೨೦೦೭ರಲ್ಲಿ ಬೆಂಗಳೂರಿನ ಬಸವ ಸಮಿತಿಯಿಂದ ಪ್ರಕಟಿಸಿದ್ದಾರೆ. ಪೂರ್ವ ದೇಶಗಳಲ್ಲಿ ನೆಲೆಸಿದ ಕನ್ನಡಿಗರು, ಹಿಂದಿ ಭಾಷಿಕರು ,ತಮಿಳರು ಮತ್ತು ಇಂಗ್ಲಿಷ ಬಲ್ಲವರಿಗಾಗಿ ವಚನಗಳನ್ನು ಆಯಾ ಭಾಷೆಗಳಲ್ಲಿ ಲಿಪ್ಯಂತರ(transliteration)ಗೊಳಿಸಿ ಕೊನೆಯಲ್ಲಿ ಇಂಗ್ಲಿಷನಲ್ಲಿ ಅನುವಾದ ನೀಡಿದ್ದಾರೆ.

೨೦೦೮ರಲ್ಲಿ ಜಿ.ಎಸ್.ಅಮೂರ್ ಅವರು ಕಲ್ಕತ್ತೆಯ ರಾಯ್ಟರ್ಸ್ ವರ್ಕಶಾಪ್ ಪ್ರಕಾಶನದ ಅಡಿಯಲ್ಲಿ *Saints and Poets* ಎಂಬ ಕೃತಿ ಹೊರತಂದಿದ್ದಾರೆ. ಬಸವಣ್ಣ, ಅಲ್ಲಮಪ್ರಭು, ಅಕ್ಕನ ಆಯ್ದ ವಚನಗಳನ್ನು ಅನುವಾದಿಸುವುದಲ್ಲದೆ ಕನ್ನಡದ ಪ್ರಮುಖ ಕವಿಗಳ ಕವಿತೆಗಳನ್ನೂ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಬಸವಣ್ಣನ ೧೫ ವಚನಗಳು, ಅಲ್ಲಮಪ್ರಭುವಿನ ೫ ವಚನಗಳು ಮತ್ತು ಅಕ್ಕನ ೧ ವಚನಗಳನ್ನು ಇಲ್ಲಿ ಇಂಗ್ಲಿಷ್‌ಗೆ ತರಲಾಗಿದೆ.

೨೦೦೯ರಲ್ಲಿ ವೆಂಕಟರೆಡ್ಡಿ ದೇಸಾಯಿಯವರು *Three Critical Essays and a few vachanas of Basavanna and Akka Mahadevi* ಕೃತಿಯಲ್ಲಿ ಬಸವಣ್ಣನ ೧೯ ಮತ್ತು ಅಕ್ಕ ಮಹಾದೇವಿಯ ೫ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಅದೇ ವರ್ಷ ಆರ್ಯ ಆಚಾರ್ಯ ಅವರು ಈ ಮೊದಲೇ ೧೯೮೬ರಲ್ಲಿ ಫ್ರೆಂಚ್‌ನಲ್ಲಿ ಪ್ರಕಟಿಸಿದ್ದ *Parole de Basava*ಕೃತಿಯ ೧೦೧ ವಚನಗಳನ್ನೇ ಪರಿಷ್ಕರಿಸಿ ಕನ್ನಡದ ವಚನಗಳೊಂದಿಗೆ ಇಂಗ್ಲಿಷ್‌ಗೆ ತರ್ಜುಮೆ ಮಾಡಿದ್ದಾರೆ.

ಹೀಗೆ ಕಳೆದ ೧೦೦ ವರ್ಷಗಳಿಂದ ವಚನ ಸಾಹಿತ್ಯ ಬೇರೆ ಭಾಷೆಗಳಿಗೆ ಅದರಲ್ಲಿಯೂ ವಿಶೇಷವಾಗಿ ಇಂಗ್ಲಿಷ್ ಭಾಷೆಗೆ ಅನುವಾದವಾಗುತ್ತ ಬಂದಿದೆ. ಈ ಸಂದರ್ಭದಲ್ಲಿ ಬೆಂಗಳೂರಿನ ಬಸವ ಸಮಿತಿ ಬಹುದೊಡ್ಡ ವಚನ ಅನುವಾದ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಎಲ್ಲ ಶರಣರಿಂದ ಆಯ್ದ ೨೫೦೦ ವಚನಗಳನ್ನು ಭಾರತೀಯ ಸಂವಿಧಾನ ಮನ್ನಿಸಿರುವ ೨೨ ಭಾಷೆಗಳಿಗೆ ಅನುವಾದಿಸುವ ಕಾರ್ಯವಿದು

ಪ್ರಥಮ ಹಂತವಾಗಿ ಕನ್ನಡಕ್ಕೆ ಒಳಗೊಂಡಂತೆ ಮರಾಠಿ, ತೆಲಗು, ತಮಿಳು, ಹಿಂದಿ, ಬೆಂಗಾಲಿ, ಪಂಜಾಬಿ, ಇಂಗ್ಲಿಷ್, ಸಂಸ್ಕೃತ, ಉರ್ದು ಹೀಗೆ ಹತ್ತು ಭಾಷೆಗಳಿಗೆ ಅನುವಾದಿಸುವ ಕಾರ್ಯ ಮುನ್ನೆಡೆದಿದೆ. ಇದರಲ್ಲಿ ಬಸವಯುಗ, ಬಸವೋತ್ತರಯುಗ ಸೇರಿ ೧೨೯ ಜನ ಶರಣರ, ೩೧ ಶರಣೆಯರ, ೧೩ ಅಜ್ಞಾತ ಶರಣರ-೧೭೩ ಜನರ ವಚನಗಳಿವೆ. ವಚನ ಸಾಹಿತ್ಯದ ಅನುವಾದದ ಇತಿಹಾಸದಲ್ಲಿಯೇ ಇದು ವ್ಯಾಪಕ ಪ್ರಯತ್ನವೆನಿಸಿದೆ.

ಇಂಥ ಪ್ರಯತ್ನಗಳ ಜೊತೆಗೆ ಸಾಗರೋತ್ತರ ವೀರಶೈವಸಂಸ್ಥೆಗಳು ಶರಣಸಾಹಿತ್ಯವನ್ನು ಅಮೇರಿಕೆ ಮತ್ತು ಆಸ್ಟ್ರೇಲಿಯಾಗಳಲ್ಲಿ (Veerashaiva Samaj of North America ಮತ್ತು Basav Samiti of Australasia) ತಮ್ಮದೇ ರೀತಿಯಲ್ಲಿ ಪ್ರಚಾರಮಾಡುತ್ತಿದ್ದಾರೆ. ವಿದೇಶಗಳಲ್ಲಿ ತಮ್ಮ ಕೆಲಸ ಕಾರ್ಯದ ಜೊತೆ ಇವರು ವಚನಸಾಹಿತ್ಯವನ್ನು ಇಂಗ್ಲಿಷ್‌ನಲ್ಲಿ ವಿವರಣೆಯೊಂದಿಗೆ ಕನ್ನಡೇತರರಿಗೆ ಪರಿಚಯಿಸುತ್ತಿರುವುದು ಸ್ತುತ್ಯಾರ್ಹ. ಇಲ್ಲಿಯ ವರೆಗೆ ಇಂಗ್ಲಿಷ್‌ನಲ್ಲಿ ಅನುವಾದಿತ ವಚನಕಾರರ ಮತ್ತು ಅವರ ವಚನಗಳ ಅನುವಾದದ ವಿವರವನ್ನು ಅನುಬಂಧ-೧ರಲ್ಲಿ ನೀಡಲಾಗಿದೆ. ಇದು ವರೆಗೆ ಆಗಿರುವ ಕೆಲಸದ ಹಿನ್ನೆಲೆಯಲ್ಲಿ ಹೇಳುವುದಾದರೆ ಇನ್ನೂ ಆಗಬೇಕಾದ ಕೆಲಸ ಅಪಾರವಾಗಿದೆ.

ಭಾರತೀಯ ಪ್ರಮುಖಭಾಷೆಗಳಲ್ಲಿ ಮತ್ತು ಜಗತ್ತಿನ ಕೆಲವು ಭಾಷೆಗಳಲ್ಲಿ ಅನುವಾದಗೊಳ್ಳುವುದರ ಮೂಲಕ ವಚನಸಾಹಿತ್ಯವು ತನ್ನ ಸಮಾಜೋಧಾರ್ಮಿಕ ವಿಚಾರಗಳನ್ನು ಪ್ರಚುರಪಡಿಸಿದೆ. ಬಸವಣ್ಣನ ಮತ್ತು ಇನ್ನಿತರ ವಚನಕಾರರ ವಚನಗಳ ಅನುವಾದ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಒಂದೂವರೆ ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿರುವ ಕನ್ನಡ ಸಾಹಿತ್ಯದ ಯಾವೊಂದು ಪ್ರಕಾರ ವಚನಸಾಹಿತ್ಯದಷ್ಟು ಇಂಗ್ಲಿಷ್ ಭಾಷೆಗೆ ತರ್ಜುಮೆಗೊಂಡುದಿಲ್ಲ. ಸುಮಾರು ನೂರು ವರ್ಷಗಳ ಕಾಲಾವಧಿಯಲ್ಲಿ ಬೇರೆ ಬೇರೆ ಕ್ಷೇತ್ರಗಳ ಅನುವಾದಕರು, ಸೃಜನಶೀಲರು, ವಿದ್ವಾಂಸರು ವಿಭಿನ್ನ ನೆಲೆಯಲ್ಲಿ ವಚನಗಳನ್ನು ಅನುವಾದಿಸಲು ಪ್ರಯತ್ನಿಸಿರುವುದು ಕನ್ನಡದ ಮಟ್ಟಿಗೆ ಚಾರಿತ್ರಿಕವಾಗಿದೆ. ಇದು ಅಂತಿಮವಾಗಿ ವಚನಸಾಹಿತ್ಯದ ಸತ್ವಾತಿಶಯವನ್ನು ಸೂಚಿಸುವಂತಿದೆ.

**ಗ್ರಂಥ ಋಣ**


೧. ಇ.ಪಿ.ರೈಸ್, *History of Kanarese Literature* ,Culcutta: Associated Press, 1921

೨. ಫ.ಗು.ಹಳಕಟ್ಟಿ , ಲೇಖನ ಸಾಹಿತ್ಯ, ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ: ಸಂಪುಟ ೧೪. ವಿಜಾಪುರ, ೨೦೦೮,ಪುಟ-೬೫.

೩. ಸಿ.ಆರ್.ಯರವಿನತೆಲಿಮಠ (ಸಂ), *Vacanas of Sri Basaveshwara*. ವಿಜಾಪುರ, ೨೦೦೩, ಪುಟ-೧೨.

೪. ವಿಜಯಕುಮಾರ ಬೋರಟ್ಟಿ : 'ಯಜಮಾನಿಕೆಗಾಗಿ ಭಾಷಾಂತರ' ಸಂಕ್ರಮಣ, ಜುಲೈ-ಅಗಷ್ಟ ೨೦೦೩ ಪುಟ-೫೪

೫. ಮಾಸ್ತಿ `Sayings of Basavanna', ಗದಗ ಗೆಳೆಯರ ಬಳಗ, ೧೯೭೭, ಪುಟ.೪

೬. ಎಸ್.ಆರ್.ಗುಂಜಾಳ, 'ವಚನ ಸಾಹಿತ್ಯ ವಾಹಿನಿ',

೭. ಫ.ಗು.ಹಳಕಟ್ಟಿ; Foreword to Sanganalmath's *Thoughts of Basava*, ೧೯೩೯, ಪುಟ–೩

೮. ಮಹೇಶ ಚಿಂತಾಮಣಿ, 'ಶಿ.ಶಿ.ಬಸವನಾಳರ ಜೀವನ ಮತ್ತು ಸಾಧನೆ' ಕೆ.ಎಲ್.ಇ.ಸಂಸ್ಥೆ. ಪ್ರಕಟಣೆ, ೧೯೯೭, ಪುಟ.೧೨೮

೯. Basavanal S.S. and Shrinivas Iyengar, *Musings of Basava* Dharwad, 194A p.p.37.

೧೦. ಮಹೇಶ ಚಿಂತಾಮಣಿ, 'ಶಿ.ಶಿ.ಬಸವನಾಳರ ಜೀವನ ಮತ್ತು ಸಾಧನೆ' ಕೆ.ಎಲ್.ಇ.ಸಂಸ್ಥೆ. ಪ್ರಕಟಣೆ, ೧೯೯೭, ಪುಟ.೧೨೮

೧೧. Bagi C.S, *Selected Sayings of Basava*, Belgaum, 1952 p.p ix.

೧೨. Pavate D.C. Foreword to Shoonya Sampaadane Vol. no.I, Dharwad, 1965 P.P.-ii

೧೩. Theodore Sunderraj and Devendrakumar Hakari, *Thus spoke Basava* p.p.-18

೧೪. P.Sama Rao Veerashaiva Vachanas and Vachanakaras Bellary, p.p.ii

೧೫. ಅದೇ–ಪುಟ–೨.

೧೬. Menezes Armando and Angadi S.M,*Vacanas of Basavanna* Sirigere, 1967 p.p.-5.

೧೭. ಅದೇ–ಪುಟ–೭೨

೧೮. Ramanujan A.K, . *Speaking of Siva* London, Penguin 1973 p.p.-xiii.

೧೯. O.L.Nagabhushan Swamy and others, *The Sign*:Hampi, 2007. p.p.-

೨೦. Hiremath C.N, *Songs Celestial and Terrestrial*: 1981 p.p.-xx

೨೧. Pejavar Umashankara, *A Garland of Pearls or Basavamala*; 1981

೨೨. Menezes Armando and Angadi S.M,*Vacanas of Siddharama;* Dharwad; Karnatak University,Prasaranga, 1978 p.p.

೨೩. Zvelebil Kamil.V. *Lord of the Meeting Rivers*, New Delhi, Banarasidas p.p.-

೨೪. K. Ishwaran *`Speaking of Basava',* Colarado west view press 1992, p.9

೨೫. Shri Siddheshwar Swamiji, Devotional Sayings of Basaveshwara: Mysore, J.S.S. Granthamale,1995,p.p.v

೨೬. D.A.Shankar, `*Forever Saints*' Mysore, J.S.S. Granthmale, 2006; p.xxvii

೨೭ Sajjan G.B. and Donurmath Basavaraj, *Encounter with Divinity*,

□□□

೧೯೧೫ರಿಂದ ಇಲ್ಲಿಯ ವರೆಗೆ ಬಸವಣ್ಣನವರ ಅನುವಾದಿತ ವಚನಗಳು ಪುನರುಕ್ತಿಗಳೂ ಸೇರಿ ೬೩೮೨, ಈ ವಚನಗಳನ್ನು ೩೮ ಅನುವಾದಕರು ೪೨ ಕೃತಿಗಳ ಮೂಲಕ ಇಂಗ್ಲಿಷ್‌ಗೆ ತರುವಲ್ಲಿ ಯಶಸ್ವಿಯಾಗಿದ್ದಾರೆ. ನಮ್ಮ ಅಧ್ಯಯನದಲ್ಲಿ ಇವೆಲ್ಲವುಗಳ ಸಂಖ್ಯಾತ್ಮಕ ವಿವೇಚನೆ ಮಾಡುವುದು ತುಂಬಾ ಅಗತ್ಯವಾಗಿದೆ. ಇದರಿಂದ ವಚನಗಳ ಒಟ್ಟು ಅನುವಾದದ ಸಂಖ್ಯೆಯನ್ನು ನಿರ್ಧರಿಸುವುದರೊಂದಿಗೆ ಯಾವ ವಚನ ಎಷ್ಟುಸಲ ಅನುವಾದಗೊಂಡಿದೆ, ಯಾವ ವಚನ ಹೆಚ್ಚು, ಯಾವ ವಚನ ಕಡಿಮೆ ಅನುವಾದಗೊಂಡಿದೆ ಎಂದು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಅದೂ ಅಲ್ಲದೆ ವಚನಗಳ ಅನುವಾದದ ಉದ್ದೇಶಗಳನ್ನು ಗುರುತಿಸಿ ಅಲ್ಲಿ ಎದುರಾಗುವ ತೊಂದರೆಗಳಿಗೆ ಕಾರಣಗಳನ್ನು ಕಂಡುಕೊಳ್ಳಲು ಸುಲಭವಾಗುತ್ತದೆ. ಅನುವಾದ ಮಾಡಿದ ಮಹನೀಯರನ್ನು ಗಮನಿಸಿ ಹೇಳುವುದಾದರೆ ಬೇರೆ ಬೇರೆ ಹಿನ್ನೆಲೆ ಮತ್ತು ವೃತ್ತಿಗಳಿಂದ ಬಂದವರು ಇದರಲ್ಲಿ ಶ್ರಮಿಸಿದ್ದು ಸ್ಪಷ್ಟವಾಗುತ್ತದೆ. ಪ್ರಸ್ತುತ ಅನುವಾದಕರಲ್ಲಿ ೨೨ ಜನ ಶಿಕ್ಷಕ ವೃತ್ತಿಯವರಿದ್ದಾರೆ. ಇನ್ನುಳಿದವರಲ್ಲಿ ತಲಾ ಮೂರು ಜನ ವಕೀಲಿ ವೃತ್ತಿ, ಸರಕಾರದ ಕಂದಾಯ ಇಲಾಖೆ, ಮತ್ತು ಧರ್ಮ ಬೋಧಕರಾಗಿ ಕೆಲಸ ನಿರ್ವಹಿಸಿದವರಿದ್ದಾರೆ. ಒಬ್ಬರು ವೈದ್ಯರು, ಇನ್ನೊಬ್ಬರು ಇಂಜನಿಯರರು, ಮತ್ತೊಬ್ಬರು ಆಕಾಶವಾಣಿ ಕೇಂದ್ರದ ನಿರ್ದೇಶಕರು ಅನುವಾದ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಯಗಟಿಯವರು ಬಸವಣ್ಣನವರ ಷಟ್‌ಸ್ಥಲದ ಎಲ್ಲ ವಚನಗಳನ್ನು ಅನುವಾದಿಸಿದ್ದರೆ; ಅರ್ಮ್ಯಾಂಡೊ ಮೆನೆಜಿಸ್ ಮತ್ತು ಅಂಗಡಿಯವರು ಷಟ್‌ಸ್ಥಲದ ಎಲ್ಲ ವಚನಗಳ ಜೊತೆಗೆ ಹೆಚ್ಚಿನ ವಚನಗಳನ್ನೂ ಅನುವಾದಿಸಿದ್ದಾರೆ. ೪೨ ಕೃತಿಗಳಲ್ಲಿ ೭ ಕೃತಿಗಳು ಜಂಟಿ ಅನುವಾದಗಳಾಗಿವೆ. ಕನ್ನಡ ಭಾಷೆ ಬಲ್ಲ ವಿದ್ವಾಂಸರು ಇಂಗ್ಲಿಷ್ ಭಾಷೆ ಬಲ್ಲವರೊಂದಿಗೆ ಸೇರಿ ನಡೆಸಿದ ಪ್ರಯತ್ನದ ಫಲವಾಗಿ ಹೊರಬಂದ ಈ ಜಂಟಿ ಕೃತಿಗಳು ಹೀಗಿವೆ :

| ಅ.ನಂ | ಜಂಟಿ ಅನುವಾದಕರು | ಕೃತಿಯ ಹೆಸರು | ಪ್ರಕಟನ ವರ್ಷ | ವಚನಗಳ ಸಂಖ್ಯೆ |
|---|---|---|---|---|
| ೧. | S.S.Basavanal and K.R.S. Iyengar | *Musings of Basava* | 1940 | 80 |
| 2. | Theodore and Hakari | *Thus spake Basava* | 1965 | 108 |
| 3. | Menezes and Angadi | *Vacanas of Basavanna* | 1967 | 958+327 |
| 4. | Rowena Hill and Prabhushankar | *Naming The Nameless* | 2001 | 26 |
| 5. | Mate Mahadevi and Jean Letschert | *Gems of Basawanna* | 2001 | 32 |

ಕಮ್ಮಟಗಳ ಮೂಲಕ ಮಾಡಿಸಿದ ಸಂಯುಕ್ತ ಪ್ರಯತ್ನದ ಫಲವಾಗಿ ಈ ಕೆಳಗಿನ ಜಂಟಿ ಕೃತಿಗಳು ಹೊರಬಂದಿವೆ.

| ಅ.ನಂ | ಜಂಟಿ ಅನುವಾದಕರು | ಕೃತಿಯ ಹೆಸರು | ಪ್ರಕಟನಾ ವರ್ಷ | ವಚನಗಳ ಸಂಖ್ಯೆ |
|---|---|---|---|---|
| 6. | H.S.Shivaprakash Nagabhushan Swamy and Others | *Selected Vachans of Saranas* | 2005 | 93 |
| 7. | Nagabhushan Swamy and Others | *The Sign* | 2007 | 103 |

ಶಿವಶರಣರ ವಚನಗಳ ಪ್ರಸಾರದಲ್ಲಿ ಕರ್ನಾಟಕದ ಮಠ–ಮಾನ್ಯಗಳ ಪಾತ್ರ ಮಹತ್ವದ್ದಾಗಿದೆ.ಕೆಲವು ಜನ ಸ್ವಾಮಿಗಳು ತಮ್ಮ ಪ್ರವಚನಗಳಲ್ಲಿ ವಚನಗಳನ್ನು ಮುಂಚಿನಿಂದಲೂ ಉಪಯೋಗಿಸುತ್ತ ಬಂದಿದ್ದಾರೆ. ಇಂಥ ಪ್ರವಚನದ ಭಾಗವಾಗಿ ಬಂದಿರುವ ವಚನಗಳನ್ನು ಇಂಗ್ಲಿಷ್ ಭಾಷೆ ವಿದ್ವಾಂಸರ ಮೂಲಕ ಅನುವಾದ ಮಾಡಿಸಿದ ಕೃತಿಗಳು ಹೀಗಿವೆ.

| ಅ.ನಂ | ಮೂಲ ಲೇಖಕರು | ಅನುವಾದಕರು | ಕೃತಿಯ ಹೆಸರು | ಪ್ರಕಟನವರ್ಷ | ವಚನಸಂಖ್ಯೆ |
|---|---|---|---|---|---|
| 1 | Shri Murugha Sharanaru | Pradhan Gurudatta | *Reflections on Religion and Society* | 1995 | 8 |
| 2 | SriSiddheshwar Swamiji | Sajjan G.B. | *God World and Soul* | 2001 | 5 |

ಇನ್ನುಳಿದ ೩೧ ಅನುವಾದಕರು ವೈಯಕ್ತಿಕವಾಗಿ ತಮಗೆ ಸರಿ ಕಂಡ, ಅನುವಾದಿಸಲು ಸರಳವಾದ, ತಾಂತ್ರಿಕತೆ ಇರಲಾರದ, ವಿವಾದಕ್ಕೆ ಒಳಗಾಗದ, ಜನಪ್ರಿಯವಾದ, ಸಮಾಜಮುಖಿಯಾದ, ಜಾಗತಿಕ ನಿಲುವನ್ನು ಹೊಂದಿದ ವಚನಗಳನ್ನು ಅನುವಾದಿಸಿರುತ್ತಾರೆ. ಈ ಕಾರ್ಯ ಭೌಗೋಲಿಕವಾಗಿ, ಚಾರಿತ್ರಿಕವಾಗಿ,

ಧಾರ್ಮಿಕವಾಗಿ, ವಚನ ಈ ಸಾಹಿತ್ಯದ ಅನುವಾದ ಪ್ರಕ್ರಿಯೆ ನಡೆದು ಬಂದುದನ್ನು ಗಮನಿಸಿದ ಬಳಿಕ ಸಂಖ್ಯಾತ್ಮಕ ವಿವೇಚನೆ ಮಾಡಬಹುದಾಗಿದೆ.

**ಭೌಗೋಲಿಕ :**

ಭೌಗೋಲಿಕವಾಗಿ ವಚನ ಚಳುವಳಿ ಹುಟ್ಟಿ ಪ್ರವರ್ಧಮಾನಕ್ಕೆ ಬಂದುದೇ ಇಂದಿನ ಉತ್ತರ ಕರ್ನಾಟಕದಲ್ಲಿ. ಇದು ಸಧ್ಯದ ಮಹಾರಾಷ್ಟ್ರದ ಮಂಗಳವೇಢೆ,ಸೊನ್ನಲಿಗೆ, ಕಲಬುರ್ಗಿ ಜಿಲ್ಲೆಯ ಕರಜಗಿ, ಮುದನೂರ, ಗೊಬ್ಬೂರು, ವಿಜಾಪುರ ಜಿಲ್ಲೆಯ ಹಾವಿನಾಳ, ಚಿಮ್ಮಲಿಗಿ, ದೇವರ ಹಿಪ್ಪರಗಿ, ಗೋಲಗೇರಿ, ಬಾಗೇವಾಡಿ, ಶಿವಮೊಗ್ಗ ಜಿಲ್ಲೆಯ ಹಿರೇ ಜಂಬೂರು, ಉಡುತಡಿ, ಬಳ್ಳಿಗಾವೆ, ಸೌರಾಷ್ಟ್ರ, ಕಾಶ್ಮೀರ, ಓರಿಸ್ಸಾ, ಆಂಧ್ರ ಹೀಗೆ ದಿಕ್ಕು ದಿಕ್ಕುಗಳಿಂದ ಕಲ್ಯಾಣಕ್ಕೆ ಶಿವಶರಣರನ್ನು ಆಕರ್ಷಿಸಿತು. ಅಷ್ಟೇ ಅಲ್ಲ ೧೨ನೆಯ ಶತಮಾನದ ಸಮಾಜೋ-ಧಾರ್ಮಿಕ ಚಳುವಳಿಯೊಂದಿಗೆ ಕನ್ನಡ ಸಾರಸ್ವತ ಲೋಕಕ್ಕೆ ಅನುಭಾವ ಸಾಹಿತ್ಯವನ್ನೂ ಕೊಟ್ಟಿತು.

ಐತಿಹಾಸಿಕವಾದ ಕಲ್ಯಾಣಕ್ರಾಂತಿಯ ನಂತರ ಚದರಿ ಹೋದ ಶರಣರು ತಮ್ಮೊಂದಿಗೆ ವಚನಗಳ ಕಟ್ಟುಗಳನ್ನು ಉಳವಿ, ಮತ್ತು ವಿಜಯನಗರದ ಕಡೆಗೆ ಕೊಂಡೊಯ್ದರು. ಪ್ರೌಢದೇವರಾಯನ ಕಾಲದಲ್ಲಿ ವಚನಗಳನ್ನು ಸಂಗ್ರಹಿಸುವ ಮತ್ತು ಸಂಕಲಿಸುವ ಕಾರ್ಯ ನಡೆಯಿತೆಂದು ತಿಳಿದುಬರುತ್ತದೆ. ಪ್ರಾಚೀನ ವೀರಶೈವ ವಿದ್ವಾಂಸರ ಸಂಯೋಜಕ ಪ್ರತಿಭೆಯ ಬಗೆಗೆ ಬರೆಯುತ್ತ ಎಂ.ಎಂ.ಕಲಬುರ್ಗಿಯವರು ಹೀಗೆ ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ "ಸೃಜನದಲ್ಲಿ ಮುತ್ತಾಗಬಲ್ಲ. ಸಂಯೋಜನೆಯಲ್ಲಿ ಮುತ್ತಿನ ಹಾರವಾಗಬಲ್ಲ ಉಭಯಗುಣ ವಚನದ ಮುಖ್ಯ ಲಕ್ಷಣವಾಗಿದೆ. ಈ ಗುಣವನ್ನು ಗುರುತಿಸಿದ ಪ್ರಾಚೀನ ವೀರಶೈವ ವಿದ್ವಾಂಸರ ಸಂಯೋಜಕ ಪ್ರತಿಭೆ, ವಚನಕಾರರ ಸೃಜನ ಪ್ರತಿಭೆಗೆ ತೀರ ಹತ್ತಿರವಾಗಿದೆ. ಇವರಿಂದ ಕಾಲಕ್ರಮದಲ್ಲಿ ವಚನಗಳು ತಾತ್ವಿಕವಾಗಿ-ಕಲಾತ್ಮಕವಾಗಿ ಸಂಯೋಜನಗೊಂಡವು, ತನ್ಮೂಲಕ ಸಂರಕ್ಷಿತಗೊಂಡವು. ಹೀಗಾಗಿ ಅವರ ಸಂಯೋಜಕಪ್ರತಿಭೆಗೆ ನಾವು ಆಶ್ಚರ್ಯಪಡಬೇಕಾಗುತ್ತದೆ; ಸಂರಕ್ಷಣ ಪ್ರಯತ್ನಕ್ಕೆ ಕೃತಜ್ಞತೆ ಹೇಳಬೇಕಾಗುತ್ತದೆ". ಉತ್ತರ ಕರ್ನಾಟಕದಲ್ಲಿ ಹುಟ್ಟಿದ ವಚನಸಾಹಿತ್ಯ ನಂತರ ದಕ್ಷಿಣ ಕರ್ನಾಟಕದಲ್ಲಿ ಪ್ರಸಾರಗೊಂಡು ಇಪ್ಪತ್ತನೆಯ ಶತಮಾನದ ವರೆಗೆ ಐತಿಹಾಸಿಕ ಮನೆ-ಮಠಗಳಲ್ಲಿ ಪೂಜೆಗೊಂಡು, ಅಜ್ಞಾತವಾಸದಲ್ಲಿದ್ದ ಈ ಸಾಹಿತ್ಯ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಮುದ್ರಣ ಯಂತ್ರದ ಸೌಲಭ್ಯದಿಂದಾಗಿ ನಿಧಾನವಾಗಿ ಬೆಳಕಿಗೆ ಬರತೊಡಗಿತು. ಹೀಗೆ ಉತ್ತರ ಕರ್ನಾಟಕದಲ್ಲಿ ಹಳಕಟ್ಟಿ, ಬಸವನಾಳ, ಚನ್ನಮಲ್ಲಿಕಾರ್ಜುನ, ಆರ್.ಸಿ.ಹಿರೇಮಠ, ಎಂ.ಎಂ.ಕಲಬುರ್ಗಿ ಅವರು ಈ ಸಾಹಿತ್ಯದ ಪ್ರಕಟಣೆಗಾಗಿ ಆರ್.ಸಿ.ದಿವಾಕರ, ಹರ್ಡೇಕರ ಮಂಜಪ್ಪ ಮೊದಲಾದವರು ವಿಮರ್ಶೆ ವಿವೇಚನೆಗೆ ಶ್ರಮಿಸಿದರು. ಎಮ್.ಆರ್.ಶ್ರೀ, ಆರ್.ಆರ್.ದಿವಾಕರ ಅವರು ವಚನ ಸಾಹಿತ್ಯವನ್ನು ಪ್ರಚುರ ಪಡಿಸಲು ಅಪಾರವಾಗಿ ಶ್ರಮಿಸಿದರು.

ಇವರೆಗೆ ಆಶ್ರಯ ನೀಡಿದುವು ಧಾರವಾಡದ ಲಿಂಗಾಯುತ ವಿದ್ಯಾಭಿವೃದ್ಧಿ ಸಂಸ್ಥೆ, ಮುರುಘಾಮಠ, ಯೋಜನಾಬದ್ಧವಾಗಿ ದುಡಿದ ಕರ್ನಾಟಕ ವಿಶ್ವವಿದ್ಯಾಲಯಗಳು ಇತ್ತೀಚಿಗೆ ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ ಈ ಕಾರ್ಯವನ್ನು ಮುನ್ನಡೆಸಿವೆ. ದಕ್ಷಿಣ ಕರ್ನಾಟಕ ವಚನ

ಸಾಹಿತ್ಯದ ಪ್ರಕಟನೆಗೆ ನಾಂದಿಹಾಡಿದವರು ಡಾ.ಎಲ್.ಬಸವರಾಜು, ಎಚ್.ದೇವೀರಪ್ಪ ಮೊದಲಾದವರು ವಿಮರ್ಶೆ–ವಿವೇಚನೆಗೆ ತೊಡಗಿದವರು ಎಂ.ಆರ್.ಶ್ರೀ. ಎಚ್. ತಿಪ್ಪೇರುದ್ರಸ್ವಾಮಿ, ಚಿದಾನಂದಮೂರ್ತಿ ಮೊದಲಾದವರು. ವಚನ ಪ್ರಕಟಣೆಗೆ ಸ್ವರೂಪ ಬಂದದ್ದು ಕರ್ನಾಟಕ ಸರಕಾರದ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ೧೫ ಸಂಪುಟಗಳ ಪ್ರಕಟಣೆಯಿಂದ.

ಹೀಗೆ ಪ್ರಕಟನೆ–ವಿಮರ್ಶೆ ನಡೆಯುತ್ತಿದ್ದಂತೆಯೇ ಉತ್ತರ ಕರ್ನಾಕದಲ್ಲಿ ಫ.ಗು.ಹಳಕಟ್ಟಿ, ಬಸವನಾಳ, ಯಗಟಿ, ಟಿ.ಎಚ್.ಎಂ.ಸದಾಶಿವಯ್ಯ, ಪಿ.ಶಾಮರಾವ್, ಬಾಗಿ, ಸಂಗನಾಳಮಠ, ಯಗಟಿ, ಮೊದಲಾದವರು ಅನುವಾದ ಕಾರ್ಯ ಕೈಗೆತ್ತಿಕೊಂಡರು ಕರ್ನಾಟಕ ವಿಶ್ವವಿದ್ಯಾಲಯ ಶೂನ್ಯ ಸಂಪಾದನೆ ಮತ್ತು ಬಿಡಿ ವಚನ ಸಂಪುಟಗಳ ಅನುವಾದಕ್ಕೆ ದೊಡ್ಡ ಬುನಾದಿ ಹಾಕಿತು. ದಕ್ಷಿಣದಲ್ಲಿ ಮಾಸ್ತಿ, ಓ.ಎಲ್.ನಾಗಭೂಷಣಸ್ವಾಮಿ, ಡಿ.ಎ.ಶಂಕರ, ವಿರೂಪಾಕ್ಷಪ್ಪ ಅವರು ಅನುವಾದ ಕಾರ್ಯದಲ್ಲಿ ವಹಿಸಿದ ಆಸಕ್ತಿ ಗಮನಾರ್ಹವಾದುದು. ಹೀಗೆ ದಕ್ಷಿಣೋತ್ತರ ಕರ್ನಾಟಕಗಳಲ್ಲಿ ಬೆಳೆದು ಜೊತೆಗೆ ವಿದೇಶದಲ್ಲಿ ಎ.ಕೆ.ರಾಮಾನುಜನ್, ಈಶ್ವರನ್, ವೆಲೆಬಿಲ್, ಶೌಟನ್ ಮೊದಲಾದ ವಿದ್ವಾಂಸರು ತೋರಿದ ತೋರುತ್ತಲಿರುವ ಆಸಕ್ತಿಗಳು ಗಮನಾರ್ಹವಾಗಿದೆ. ವಚನ ಸಾಹಿತ್ಯದ ಅನುವಾದ ಪ್ರಾದೇಶಿಕವಾಗಿ ವಿಸ್ತಾರಗೊಳ್ಳುತ್ತಲಿರುವುದರ ಸೂಚನೆಯಾಗಿದೆ. ಯಾವ ಪ್ರದೇಶದ ಎಷ್ಟೇ ಅನುವಾದ ಕಾರ್ಯ ಮಾಡಲಿ ಎಲ್ಲರ ಗಮನ ಬಸವಣ್ಣನ ವಚನಗಳ ಮೇಲೆಯೇ ಎನ್ನುವುದು ತೀರ ಸತ್ಯವಾದುದು

**ಚಾರಿತ್ರಿಕ :**

ವಚನ ಸಾಹಿತ್ಯದ ಅನುವಾದ ಕಾರ್ಯ ನೂರುವರ್ಷಗಳ ಅವಧಿಯಲ್ಲಿ ಕೆಲವು ಘಟ್ಟಗಳನ್ನು ರೂಪಿಸಿಕೊಳ್ಳುತ್ತ ಸಾಗಿಬಂದಿದೆ. ೧೯೧೫. ಇ.ಪಿ.ರೈಸ್ ಅವರಿಂದ ಆರಂಭವಾದ ಈ ಕಾರ್ಯ ಹಳಕಟ್ಟಿ ೧೯೨೨, ಮಾಸ್ತಿ ೧೯೩೪, ಸಂಗನಾಳಮಠ ೧೯೩೯, ಬಸವನಾಳ ೧೯೪೦, ಯಗಟಿ ೧೯೫೦ ಮೊದಲಾದವರಿಂದ ಮೊದಲು ಘಟ್ಟವನ್ನು ರೂಪಿಸಿಕೊಂಡಿತು. ಎರಡನೆಯ ಘಟ್ಟವನ್ನು ಆರಂಭಿಸಿ ವಚನ ಸಾಹಿತ್ಯ ಭಾಷಾಂತರದ ವಸಂತ ಕಾಲವನ್ನು ಸೃಷ್ಟಿಸಿದುದು ಕರ್ನಾಟಕ ವಿಶ್ವವಿದ್ಯಾಲಯ ಈ ಸಂಸ್ಥೆ ಪೂರೈಸಿದ ಶೂನ್ಯಸಂಪಾದನೆಯ ೫ ಸಂಪುಟ(೧೯೬೮–೧೯೭೨) ಸಿದ್ಧರಾಮ(೧೯೭೮) ಕೃತಿಗಳ ಅನುವಾದ ಕಾರ್ಯ ಇಂದಿಗೂ ಒಂದು ಐತಿಹಾಸಿಕತೆಯನ್ನು ನಿರ್ಮಿಸಿವೆ. ಇದೇ ಅವಧಿಯಲ್ಲಿ ಸಂಭವಿಸಿದ ಬಸವಣ್ಣನವರ ಅಷ್ಟ ಶತಮಾನೋತ್ಸವ ಈ ಕೆಲಸಕ್ಕೆ ಇನ್ನಷ್ಟು ಪ್ರೋತ್ಸಾಹ ನೀಡಿತು. ಮೂರನೆಯ ಘಟ್ಟ ಮತ್ತೆ ಬೇರೆ ಬೇರೆ ವಿದ್ವಾಂಸರಿಂದ ಬೇರೆ ಬೇರೆ ಧಾರ್ಮಿಕ ಸಾರ್ವಜನಿಕ ಸಂಸ್ಥೆಗಳಿಂದ ರೂಪಗೊಂಡಿತು. ಇವುಗಳಲ್ಲಿ ಜಿ.ಎಸ್.ನಾಗಭೂಷಣಸ್ವಾಮಿ, ಡಿ.ಎ.ಶಂಕರ ಮೊದಲಾದವರು ಸಲ್ಲಿಸಿದ ಸೇವೆ ಗಮನಾರ್ಹವಾದುದು. ಇಲ್ಲಿಯ ಎಲ್ಲರ ಗಮನ ಬಸವಣ್ಣನ ಮೇಲೆಯೇ ಕೇಂದ್ರೀಕೃತಗೊಂಡಿದ್ದು ಈ ಬೆಳವಣಿಗೆಯನ್ನು ಅಂದರೆ ಬಸವಣ್ಣನವರ ವಚನಗಳ ಅನುವಾದ ಕಾರ್ಯವನ್ನು ದಶಮಾನ ಘಟ್ಟಗಳಲ್ಲಿ ಕೆಳಗಿನಂತೆಯೂ ವಿವರಿಸಬಹುದಾಗಿದೆ.

ಅವುಗಳನ್ನು ಈ ಕೆಳಗಿನಂತೆ ಸಮೀಕ್ಷಿಸಬಹುದು.

ಕಳೆದ ಶತಮಾನದ ಎರಡನೆಯ ದಶಕದಲ್ಲಿ (೧೯೧೦–೧೯೨೦) ಹೊರಬಂದ ಕೃತಿಯಲ್ಲಿ ೩ ವಚನಗಳು, ಮೂರನೆಯ ದಶಕದಲ್ಲಿ (೧೯೨೧–೧೯೩೦) ಹೊರಬಂದ ಕೃತಿಯಲ್ಲಿ ೧೩೯ ವಚನಗಳು,

ನಾಲ್ಕನೆಯ ದಶಕದಲ್ಲಿ (೧೯೩೧-೧೯೪೦) ಹೊರಬಂದ ನಾಲ್ಕು ಅನುವಾದಿತ ಕೃತಿಗಳಲ್ಲಿ ೨೭೮ ವಚನಗಳು, ಐದನೆಯ ದಶಕದಲ್ಲಿ (೧೯೪೧-೧೯೫೦) ಹೊರಬಂದ ಕೃತಿಯಲ್ಲಿ ೯೫೬ ವಚನಗಳು, ಆರನೆಯ ದಶಕದಲ್ಲಿ(೧೯೫೧-೧೯೬೦) ಹೊರಬಂದ ಕೃತಿಯಲ್ಲಿ ೨೨೬, ಏಳನೆಯ ದಶಕದಲ್ಲಿ(೧೯೬೧-೧೯೭೦) ಹೊರಬಂದ ಏಳು ಕೃತಿಗಳಲ್ಲಿ ೨೫೫೭ ವಚನಗಳು, ಎಂಟನೆಯ ದಶಕದಲ್ಲಿ (೧೯೭೧-೧೯೮೦) ಹೊರಬಂದ ನಾಲ್ಕು ಕೃತಿಗಳಲ್ಲಿ ೩೨೫ ,ಒಂಭತ್ತನೆಯ ದಶಕದಲ್ಲಿ (೧೯೮೧-೧೯೯೦) ಹೊರಬಂದ ಐದು ಕೃತಿಗಳಲ್ಲಿ ೭೦೨ ವಚನಗಳು ಮತ್ತು ಕೊನೆಯ ದಶಕದಲ್ಲಿ (೧೯೯೧-೨೦೦೦) ಹೊರಬಂದ ಮೂರು ಕೃತಿಗಳಲ್ಲಿ ೧೭೭ವಚನಗಳು ಪ್ರಕಟಗೊಂಡಿವೆ. (೨೦೦೧-೨೦೦೯) ರವರೆಗೆ ೧೫ ಕೃತಿಗಳು ಹೊರಬಂದಿದ್ದು ೧೦೨೭ ವಚನಗಳು ಅನುವಾದಗೊಂಡಿವೆ. ಒಟ್ಟು ೪೨ ಅನುವಾದಿತ ಕೃತಿಗಳಲ್ಲಿ ೬೩೮೨ ವಚನಗಳು ಇಂಗ್ಲಿಷಿಗೆ ಅನುವಾದ ಗೊಂಡಿರುವುದು ಕಂಡು ಬರುತ್ತದೆ.

ಬಸವಣ್ಣನವರ ಷಟಸ್ಥಲದ ವಚನಗಳ ಅನುವಾದದ ಸಮಗ್ರ ಪಟ್ಟಿಯೊಂದನ್ನು ಸಿದ್ಧಪಡಿಸಿದಾಗ ಯಾರು ಎಷ್ಟು ವಚನಗಳನ್ನು ಅನುವಾದಿಸಿದರು, ಯಾವ ವಚನ ಹೆಚ್ಚು ಅನುವಾದ ಕಂಡಿತು, ಯಾವ ವಚನ ಕಡಿಮೆ ಅನುವಾದ ಕಂಡಿತು, ಅದಕ್ಕೆ ಕಾರಣವೇನಿರಬಹುದು, ಅವುಗಳ ಹಿಂದಿನ ಸಾಂಸ್ಕೃತಿಕ ಒತ್ತಡಗಳು ಯಾವವು, ಅವರು ಆ ಕೆಲಸ ಕೈಗೊಳ್ಳಲು ಪ್ರೇರಣೆ ಏನು, ಮಾನಸಿಕ ಒಲವು ನಿಲವುಗಳೇನು? ಎಂಬಿವು ನಮ್ಮ ಗಮನಕ್ಕೆ ಬರುತ್ತವೆ. ಅಂಥ ಒಂದು ಪಟ್ಟಿ ಇಲ್ಲಿದ್ದು ಇದಕ್ಕೆ ನಾವು ಎಂ.ಎಂ.ಕಲಬುರ್ಗಿಯವರು ಸಂಪಾದಿಸಿದ ಜನಪ್ರಿಯ ವಚನ ಸಂಪುಟ-೧ರ ಪ್ರಥಮ ಅವೃತ್ತಿಯ ವಚನ ಸಂಖ್ಯೆಯನ್ನು ಬಳಸಿ ಕೊಂಡಿದ್ದೇವೆ. ಇಲ್ಲಿ ಪ್ರತಿಯೊಂದು ವಚನದ ಅನುಕ್ರಮ ಸಂಖ್ಯೆ, ವಚನದ ಮೊದಲಶಬ್ದ ಅದನ್ನು ಅನುವಾದಿಸಿದ ವಿದ್ವಾಂಸರ/ಕೃತಿ ಹೆಸರು ಮತ್ತು ಆ ಕೃತಿಯಲ್ಲಿಯ ವಚನ ಕ್ರಮ ಸಂಖ್ಯೆ ಸೂಚಿಸಲಾಗಿದೆ.

೧. ಉದಕ : ಯುಗಟ-೧, ಬಾಗಿ-೧, ಥಿಯೋಡೋರ್-ಹಕಾರಿ-೧, ಪಿ.ಶಾಮರಾವ್-೩೬, ಯಮುನಾಚಾರ-೧, ಮೆನೆಜಿಸ್-ಅಂಗಡಿ-೧, ಸಿ.ಎನ್.ಹಿರೇಮಠ-೧, ವೆಲೆಬಿಲ್-೧, ಕೆ.ಈಶ್ವರನ್-೧, ಮಾತೆ ಮಹಾದೇವಿ-೧, ಶಿವಪ್ರಕಾಶ-ನಾಗಭೂಷಣ-೪೦, ಡಿ.ಎ.ಶಂಕರ-೧, ದಿ.ಸೈನ್-೧೦. ಬಸರೂರುಸುಬ್ಬರಾವ್೧, ಆರ್ಯ ಆಚಾರ್ಯ-೧, ಒಟ್ಟು=೧೫.

೨. ಕಾಳಿಯ : ಯುಗಟ-೨, ಮೆನೆಜಿಸ್-ಅಂಗಡಿ-೨, ಮಾತೆ ಮಹಾದೇವಿ-೨, ದಿ.ಸೈನ್೩೪, ಬಸರೂರುಸುಬ್ಬರಾವ್-೨, ಒಟ್ಟು=೫.

೩. ಅಯ್ಯಾ ನೀನು : ಯುಗಟ ೩, ಮೆನೆಜಿಸ್-ಅಂಗಡಿ,-೩, ಮಾತೆ ಮಹಾದೇವಿ-೩, ಒಟ್ಟು=೩.

೪. ಅಯ್ಯಾ ಏಳೇಳು : ಯುಗಟ-೪, ಮೆನೆಜಿಸ್-ಅಂಗಡಿ-೪, ಒಟ್ಟು=೨.

೫. ಅಯ್ಯಾ ನಿಮ್ಮ : ಯುಗಟ-೫, ಮೆನೆಜಿಸ್-ಅಂಗಡಿ-೫, ಒಟ್ಟು=೨.

೬. ಕರಿ ಘನ ಅಂಕುಶ : ಸಂಗನಾಳಮಠ,-೩೨, ಬಸವನಾಳ-ಅಯ್ಯಂಗಾರ-೬೯, ಯುಗಟ-೬, ಬಾಗಿ-೨, ಥಿಯೋಡೋರ್-ಹಕಾರಿ-೩೫, ಪಿ.ಶಾಮರಾವ್-೧೧೪, ಮೆನೆಜಿಸ್-ಅಂಗಡಿ-೬, ಪಿ.ಬಿ.ದೇಸಾಯಿ-೮, ವೆಲೆಬಿಲ್-೨, ಸಿ.ಎನ್.ಹಿರೇಮಠ-೩೬, ಅನಂತನಾರಾಯಣ-೫೪, ಮಾತೆ ಮಹಾದೇವಿ-೧೨, ಶಿವಪ್ರಕಾಶ-ನಾಗಭೂಷಣ-೨೫, ವಿರುಪಾಕ್ಷಪ್ಪ-೬೪, ಡಿ.ಎ.ಶಂಕರ-೨, ದಿ.ಸೈನ್-೨೭, ಆರ್ಯ ಆಚಾರ್ಯ-೨ ಒಟ್ಟು=೧೬.

೭. ಭವ ಬಂಧನ: ಯುಗಟಿ–೭, ಮೆನೆಜಿಸ್–ಅಂಗಡಿ–೭, ಶ್ರೀಸಿದ್ಧೇಶ್ವರ ಸ್ವಾಮೀಜಿ–೧, ಮಾತೆ ಮಹಾದೇವಿ–೪ ಒಟ್ಟು=೪.

೮. ಸಂಸಾರ ಸಾಗರದ : ಯುಗಟಿ–೮, ಬಾಗಿ–೩, ಸಿದ್ದಪ್ಪಾರಾಧ್ಯ–೧, ಮೆನೆಜಿಸ್–ಅಂಗಡಿ–೮, ಶ್ರೀಸಿದ್ಧೇಶ್ವರ ಸ್ವಾಮೀಜಿ–೨, ಮಾತೆ ಮಹಾದೇವಿ–೧೦, ಡಿ.ಎ.ಶಂಕರ–೩, ದಿ.ಸೈನ್–೮೮ ಉಷಾ ಪಾಲಾಕ್ಷಪ್ಪ–೮೧. ಒಟ್ಟು=೯.

೯. ಚಂದ್ರಮನಂತೆ : ಹಳಕಟ್ಟಿ–೧, ಬಸವನಾಳ–ಅಯ್ಯಂಗಾರ –೧೧, ಯುಗಟಿ– ೯, ಬಾಗಿ–೪, ಮೆನೆಜಿಸ್–ಅಂಗಡಿ–೯,ರಾಮಾನುಜನ್–೮, ಶ್ರೀಸಿದ್ಧೇಶ್ವರ ಸ್ವಾಮೀಜಿ–೩, ಮಾತೆ ಮಹಾದೇವಿ–೧೧, ಒಟ್ಟು=೯

೧೦. ಇಲಿ ಗಡಹ : ಯುಗಟಿ–೧೦, ಬಾಗಿ–೫, ಮೆನೆಜಿಸ್–ಅಂಗಡಿ–೧೦, ರಾಮಾನುಜನ್–೯, ಮಾತೆ ಮಹಾದೇವಿ–೬, ಒಟ್ಟು=೫.

೧೧. ಕಪ್ಪೆ ಸರ್ಪನ : ಹಳಕಟ್ಟಿ–೧೦, ಬಸವನಾಳ–ಅಯ್ಯಂಗಾರ–೧೨, ಯುಗಟಿ–೧೧, ಬಾಗಿ೬, ಸಿದ್ದಪ್ಪಾರಾಧ್ಯ–೨, ಮೆನೆಜಿಸ್–ಅಂಗಡಿ–೧೧, ಶ್ರೀಸಿದ್ಧೇಶ್ವರ ಸ್ವಾಮೀಜಿ–೪, ಮಾತೆ ಮಹಾದೇವಿ–೯, ಒಟ್ಟು=೮.

೧೨. ಶೂಲದ ಮೇಗಣ : ಯುಗಟಿ–೧೨, ಸಿದ್ದಪ್ಪಾರಾಧ್ಯ–೩, ಮೆನೆಜಿಸ್–ಅಂಗಡಿ–೧೨, ವೆಲೆಬಿಲ್೩, ಮಾತೆ ಮಹಾದೇವಿ–೮, ಒಟ್ಟು=೫.

೧೩. ಸಂಸಾರವೆಂಬ : ಮಾಸ್ತಿ–೧೦೧, ಯುಗಟಿ–೧೩,ಬಾಗಿ–೮, ಸಿದ್ದಪ್ಪಾರಾಧ್ಯ–೪, ಮೆನೆಜಿಸ್–ಅಂಗಡಿ–೧೩, ಮೂರುಶಿಳ್ಳಿ,–೩, ಉಷಾ ಪಾಲಾಕ್ಷಪ್ಪ,–೮೦ ಒಟ್ಟು=೬

೧೪. ನಾನೊಂದ: ಹಳಕಟ್ಟಿ–೫, ಮಾಸ್ತಿ–೧೦೪, ಬಸವನಾಳ–ಅಯ್ಯಂಗಾರ–೧೬, ಯುಗಟಿ೧೪, ಬಾಗಿ–೯, ಸಿದ್ದಪ್ಪಾರಾಧ್ಯ–೫, ಮೆನೆಜಿಸ್–ಅಂಗಡಿ ೧೪, ಅನಂತ ನಾರಾಯಣ೩೭, ಶ್ರೀಸಿದ್ಧೇಶ್ವರಸ್ವಾಮೀಜಿ–೬, ಮಾತೆ ಮಹಾದೇವಿ–೨೨, ಮೂರುಶಿಳ್ಳಿ–೪, ವಿರುಪಾಕ್ಷಪ್ಪ–೯೫, ಡಿ.ಎ.ಶಂಕರ–೪ ಉಷಾಪಾಲಾಕ್ಷಪ್ಪ೬೯ ಒಟ್ಟು=೧೪.

೧೫. ಜನಿತಕ್ಕೆ : ಯುಗಟಿ–೧೫, ಬಾಗಿ–೧೦, ಸಿದ್ದಪ್ಪಾರಾಧ್ಯ–೬,ಮೆನೆಜಿಸ್–ಅಂಗಡಿ–೧೫, ವೆಲೆಬಿಲ್–೪, ಮಾತೆ ಮಹಾದೇವಿ–೨೩, ದಿ.ಸೈನ್–೪೭, ಒಟ್ಟು=೭.

೧೬. ಕೊಡೆವಿಡಿಯೆ : ಯುಗಟಿ–೧೬, ಮೆನೆಜಿಸ್–ಅಂಗಡಿ–೧೬, ವೆಲೆಬಿಲ್–೫, ಒಟ್ಟು=೩.

೧೭. ಇಂದಿಗೆಂತು : ಹಳಕಟ್ಟಿ–೪, ಯುಗಟಿ–೧೭, ಬಾಗಿ–೧೧, ಸಿದ್ದಪ್ಪಾರಾಧ್ಯ–೭, ಮೆನೆಜಿಸ್–ಅಂಗಡಿ–೧೭, ಶ್ರೀಸಿದ್ಧೇಶ್ವರ ಸ್ವಾಮೀಜಿ–೭, ಒಟ್ಟು=೬.

೧೮. ದಿಟ ಪುಟ : ಯುಗಟಿ–೧೮, ಬಾಗಿ–೧೨, ಮೆನೆಜಿಸ್–ಅಂಗಡಿ–೧೮, ಶ್ರೀಸಿದ್ಧೇಶ್ವರ ಸ್ವಾಮೀಜಿ–೮, ಒಟ್ಟು=೪.

೧೯. ಆಸತ್ತೆ: ಯುಗಟಿ–೧೯, ಸಿದ್ದಪ್ಪಾರಾಧ್ಯ–೮,ಮೆನೆಜಿಸ್–ಅಂಗಡಿ–೧೯, ಶ್ರೀಸಿದ್ಧೇಶ್ವರ ಸ್ವಾಮೀಜಿ–೯, ಒಟ್ಟು=೪.

೨೦. ಸಂಸಾರ : ಯುಗಟಿ–೨೦, ಬಾಗಿ–೧೩, ಸಿದ್ದಪ್ಪಾರಾಧ್ಯ–೯, ಮೆನೆಜಿಸ್–ಅಂಗಡಿ–೨೦, ಶ್ರೀಸಿದ್ಧೇಶ್ವರ ಸ್ವಾಮೀಜಿ–೧೦, ಒಟ್ಟು=೫.

೨೧. ಅರಿಯದೆ : ಯುಗಟಿ–೨೧, ಸಿದ್ದಪ್ಪಾರಾಧ್ಯ–೧೦, ಮೆನೆಜಿಸ್–ಅಂಗಡಿ–೨೧, ರಾಮಾನುಜನ್–೧೦, ಶ್ರೀಸಿದ್ಧೇಶ್ವರಸ್ವಾಮೀಜಿ–೧೧, ಉಷಾಪಾಲಾಕ್ಷಪ್ಪ–೧೧, ಒಟ್ಟು=೬.

೨೨. ಎಂದೋ : ಹಳಕಟ್ಟಿ-೨, ಮಾಸ್ತಿ-೯೦, ಯುಗಟಿ-೨೨, ಬಾಗಿ-೧೪, ಮೆನೆಜಿಸ್-ಅಂಗಡಿ೨೨, ಶ್ರೀಸಿದ್ಧೇಶ್ವರಸ್ವಾಮೀಜಿ-೧೨, ಒಟ್ಟು=೬.

೨೩. ಲೇಸ ಕಂಡು : ಮಾಸ್ತಿ- ೯೧, ಯುಗಟಿ-೨೩, ಸಿದ್ದಪ್ಪಾರಾಧ್ಯ-೧೧, ಮೆನೆಜಿಸ್-ಅಂಗಡಿ೨೩, ಶ್ರೀಸಿದ್ಧೇಶ್ವರಸ್ವಾಮೀಜಿ-೧೩, ಡಿ.ಎ.ಶಂಕರ-೫, ದಿ.ಸೈನ್-೮೩, ಒಟ್ಟು=೭.

೨೪. ಮುನ್ನಮಾಡಿದ :ಯುಗಟಿ-೨೪, ಸಿದ್ದಪ್ಪಾರಾಧ್ಯ-೧೨, ಮೆನೆಜಿಸ್-ಅಂಗಡಿ-೨೪, ಒಟ್ಟು=೩.

೨೫. ಚಂದ್ರೋದಯ: ಹಳಕಟ್ಟಿ-೮, ಯುಗಟಿ-೨೫, ಥಿಯೋಡೋರ್-ಹಕಾರಿ೧೪, ಪಿ.ಶಾಮರಾವ್೨೬, ಮೆನೆಜಿಸ್-ಅಂಗಡಿ-೨೫, ಶ್ರೀಸಿದ್ಧೇಶ್ವರಸ್ವಾಮೀಜಿ-೧೪, ಅನಂತನಾರಾಯಣ೪೨, ಸಿ.ಎನ್.ಹಿರೇಮಠ-೧೫, ಶಿವಪ್ರಕಾಶ-ನಾಗಭೂಷಣ೮೨, ದಿ.ಸೈನ್-೪೧, ಆರ್ಯ ಆಚಾರ್ಯ-೩, ಒಟ್ಟು=೧೧

೨೬. ಒಲೆ ಹತ್ತಿ : ಹಳಕಟ್ಟಿ-೯, ಮಾಸ್ತಿ-೧೦೫, ಬಸವನಾಳ-ಅಯ್ಯಂಗಾರ-೯, ಯುಗಟಿ-೨೬, ಬಾಗಿ-೧೫ ಥಿಯೋಡೋರ್-ಹಕಾರಿ-೫೮, ಪಿ.ಶಾಮರಾವ್-೩೭, ಮೆನೆಜಿಸ್-ಅಂಗಡಿ-೨೬, ಸಿ.ಎನ್.ಹಿರೇಮಠ-೫೯, ಪಿ.ಉಮಾಶಂಕರ-೯೯, ವೆಲೆಬಿಲ್೬, ಶ್ರೀಸಿದ್ಧೇಶ್ವರ ಸ್ವಾಮೀಜಿ ೧೫, ಪ್ರಧಾನ ಗುರುದತ್ತ-೬, ಪ್ರಭುಶಂಕರ-ರೊವೆನೆ ಹಿಲ್-೫, ಮಾತೆ ಮಹಾದೇವಿ-೩೨, ಶಿವಪ್ರಕಾಶ-ನಾಗಭೂಷಣ-೪೨, ವಿರುಪಾಕ್ಷಪ್ಪ-೪೨, ಡಿ.ಎ.ಶಂಕರ-೬, ದಿ.ಸೈನ್-೨೩, ಉಷಾಪಾಲಾಕ್ಷಪ್ಪ-೯೬. ಒಟ್ಟು=೨೦

೨೭. ಎನ್ನ ಗುಣ: ಯುಗಟಿ-೨೭, ಪಿ.ಶಾಮರಾವ್-೩೭, ಮೆನೆಜಿಸ್-ಅಂಗಡಿ-೨೭, ಶ್ರೀಸಿದ್ಧೇಶ್ವರ ಸ್ವಾಮೀಜಿ-೧೬ ಒಟ್ಟು=೫

೨೮. ಬೆದಕದಿರು : ಯುಗಟಿ-೨೮, ಸಿದ್ದಪ್ಪಾರಾಧ್ಯ-೧೩, ಮೆನೆಜಿಸ್-ಅಂಗಡಿ-೨೮, ಡಿ.ಎ.ಶಂಕರ೭, ಉಷಾ ಪಾಲಾಕ್ಷಪ್ಪ-೧೯, ಒಟ್ಟು=೫

೨೯. ಎನ್ನ ಚಿತ್ತವು: ಯುಗಟಿ-೨೯, ಬಾಗಿ-೧೬, ಮೆನೆಜಿಸ್-ಅಂಗಡಿ-೨೯, ಶ್ರೀಸಿದ್ಧೇಶ್ವರ ಸ್ವಾಮೀಜಿ೧೭, ಡಿ.ಎ.ಶಂಕರ-೮, ದಿ.ಸೈನ್-೧೫, ಉಷಾ ಪಾಲಾಕ್ಷಪ್ಪ-೧೦೨, ಒಟ್ಟು=೭

೩೦. ಎನ್ನ ನಡೆ : ಯುಗಟಿ-೩೦, ಬಾಗಿ-೧೭, ಥಿಯೋಡೋರ್-ಹಕಾರಿ-೧೨, ಸಿದ್ದಪ್ಪಾರಾಧ್ಯ೧೪, ಮೆನೆಜಿಸ್-ಅಂಗಡಿ-೩೦, ಸಿ.ಎನ್.ಹಿರೇಮಠ-೧೩, ಶ್ರೀಸಿದ್ಧೇಶ್ವರ ಸ್ವಾಮೀಜಿ೧೯, ಉಷಾಪಾಲಾಕ್ಷಪ್ಪ-೧೦೬, ಒಟ್ಟು=೮

೩೧. ಮುಂಗೈಯ : ಯುಗಟಿ-೩೧, ಸಿದ್ದಪ್ಪಾರಾಧ್ಯ-೧೫, ಮೆನೆಜಿಸ್-ಅಂಗಡಿ-೩೧, ಒಟ್ಟು=೩

೩೨. ಕೊಂಬೆಯ : ಯುಗಟಿ-೩೨,ಬಾಗಿ-೧೮, ಮೆನೆಜಿಸ್-ಅಂಗಡಿ-೩೨, ಶ್ರೀಸಿದ್ಧೇಶ್ವರ ಸ್ವಾಮೀಜಿ೨೦, ಶಿವಪ್ರಕಾಶ-ನಾಗಭೂಷಣ-೮, ಡಿ.ಎ.ಶಂಕರ-೯,ಆರ್ಯ ಆಚಾರ್ಯ-೪, ಒಟ್ಟು=೭

೩೩. ಮರಸನೇರಿದ : ಯುಗಟಿ- ೩೩,ಮೆನೆಜಿಸ್-ಅಂಗಡಿ-೩೩ ಸಿದ್ದಪ್ಪಾರಾಧ್ಯ-೧೬ ರಾಮಾನುಜನ್-೧೧, ಶ್ರೀಸಿದ್ಧೇಶ್ವರ ಸ್ವಾಮೀಜಿ-೨೧,ವಿರುಪಾಕ್ಷಪ್ಪ-೮೮, ಶಿವಪ್ರಕಾಶ-ನಾಗಭೂಷಣ-೮೬, ಉಷಾ ಪಾಲಾಕ್ಷಪ್ಪ,-೮೨ ಒಟ್ಟು=೮

೩೪. ಅಂದಣ : ಮಾಸ್ತಿ-೭೩, ಬಸವನಾಳ-ಅಯ್ಯಂಗಾರ-೩೨, ಯುಗಟಿ-೩೪, ಬಾಗಿ-೧೯, ಥಿಯೋಡೋರ್-ಹಕಾರಿ-೩೮, ಸಿದ್ದಪ್ಪಾರಾಧ್ಯ-೪೭೪, ಮೆನೆಜಿಸ್-ಅಂಗಡಿ೩೪,

ಸಿ.ಎನ್.ಹಿರೇಮಠ-೩೯, ಶ್ರೀಸಿದ್ಧೇಶ್ವರ ಸ್ವಾಮೀಜಿ-೨೨, ವಿರುಪಾಕ್ಷಪ್ಪ-೪೯,
ಶಿವಪ್ರಕಾಶ-ನಾಗಭೂಷಣ-೩೮, ಡಿ.ಎ.ಶಂಕರ-೧೦, ದಿ.ಸೈನ್೧, ಒಟ್ಟು=೧೩

೩೫. ತುಪ್ಪದ : ಯುಗಟಿ-೩೫, ಬಾಗಿ-೨೦, ಸಿದ್ದಪ್ಪಾರಾಧ್ಯ-೧೭, ಮೆನೆಜಿಸ್-ಅಂಗಡಿ-೩೫,
ವೆಲೆಬಿಲ್-೭, ಶ್ರೀಸಿದ್ಧೇಶ್ವರ ಸ್ವಾಮೀಜಿ-೨೩,ಡಿ.ಎ.ಶಂಕರ-೧೧ ಒಟ್ಟು=೭

೩೬. ಒಂದು ಮೊಲಕ್ಕೆ :ಮಾಸ್ತಿ-೧೯೬, ಬಸವನಾಳ-ಅಯ್ಯಂಗಾರ-೧೩, ಯುಗಟಿ-೩೬, ಬಾಗಿ೨೧,
ಸಿದ್ದಪ್ಪಾರಾಧ್ಯ_೧೮, ಮೆನೆಜಿಸ್-ಅಂಗಡಿ-೩೬, ರಾಮಾನುಜನ-೧,
ಶ್ರೀಸಿದ್ಧೇಶ್ವರ ಸ್ವಾಮೀಜಿ-೨೪, ಶಿವಪ್ರಕಾಶ-ನಾಗಭೂಷಣ-೫, ಡಿ.ಎ.ಶಂಕರ೧೨,
ದಿ.ಸೈನ್-೨೧, ಒಟ್ಟು=೧೧

೩೭. ದಂದುಗ : ಯುಗಟಿ-೩೭, ಬಾಗಿ-೨೨, ಸಿದ್ದಪ್ಪಾರಾಧ್ಯ-೧೯, ಮೆನೆಜಿಸ್-ಅಂಗಡಿ-೩೭,
ಶ್ರೀಸಿದ್ಧೇಶ್ವರ ಸ್ವಾಮೀಜಿ-೨೫, ಒಟ್ಟು=೫

೩೮. ತನ್ನ : ಮಾಸ್ತಿ-೭೪, ಯುಗಟಿ-೩೮, ಸಿದ್ದಪ್ಪಾರಾಧ್ಯ-೨೦, ಮೆನೆಜಿಸ್-ಅಂಗಡಿ-೩೮,
ಶ್ರೀಸಿದ್ಧೇಶ್ವರ ಸ್ವಾಮೀಜಿ-೨೬, ಡಿ.ಎ.ಶಂಕರ-೧೩, ಉಷಾ ಪಾಲಾಕ್ಷಪ್ಪ-೮೫,
ಒಟ್ಟು=೭

೩೯. ತನ್ನಿಚ್ಚೆಯ :ಯುಗಟಿ-೩೯,ಬಾಗಿ-೨೩, ಸಿದ್ದಪ್ಪಾರಾಧ್ಯ-೨೧ ಮೆನೆಜಿಸ್-ಅಂಗಡಿ-೩೯,
ಶ್ರೀಸಿದ್ಧೇಶ್ವರ ಸ್ವಾಮೀಜಿ-೨೭ ಒಟ್ಟು=೫

೪೦. ಸುಡಲೀ : ಯುಗಟಿ-೪೦, ಬಾಗಿ-೨೪, ಸಿದ್ದಪ್ಪಾರಾಧ್ಯ-೨೨,ಮೆನೆಜಿಸ್-ಅಂಗಡಿ-೪೦,
ಶ್ರೀಸಿದ್ಧೇಶ್ವರ ಸ್ವಾಮೀಜಿ-೨೮, ಡಿ.ಎ.ಶಂಕರ-೧೪, ಒಟ್ಟು=೬

೪೧. ವಚನದ : ಯುಗಟಿ-೪೧, ಸಿದ್ದಪ್ಪಾರಾಧ್ಯ-೨೩, ಮೆನೆಜಿಸ್-ಅಂಗಡಿ-೪೧, ಶ್ರೀಸಿದ್ಧೇಶ್ವರ
ಸ್ವಾಮೀಜಿ-೨೯, ಒಟ್ಟು=೪

೪೨. ಅಂಗದ : ಯುಗಟಿ-೪೨, ಸಿದ್ದಪ್ಪಾರಾಧ್ಯ-೨೪, ಮೆನೆಜಿಸ್-ಅಂಗಡಿ-೪೨, ಶ್ರೀಸಿದ್ಧೇಶ್ವರ
ಸ್ವಾಮೀಜಿ-೩೦ ಒಟ್ಟು=೪

೪೩. ವಿಕಳ : ಯುಗಟಿ-೪೩, ಸಿದ್ದಪ್ಪಾರಾಧ್ಯ-೨೫, ಮೆನೆಜಿಸ್-ಅಂಗಡಿ-೪೩, ವೆಲೆಬಿಲ್೮,
ಶ್ರೀಸಿದ್ಧೇಶ್ವರ ಸ್ವಾಮೀಜಿ-೩೧, ಉಷಾ ಪಾಲಾಕ್ಷಪ್ಪ-೯೪, ಒಟ್ಟು=೬

೪೪. ಮುನಿದೆ : ಹಳಕಟ್ಟಿ-೨೧, ಯುಗಟಿ-೪೪, ಸಿದ್ದಪ್ಪಾರಾಧ್ಯ-೨೬, ಮೆನೆಜಿಸ್-ಅಂಗಡಿ-೪೪,
ಶ್ರೀಸಿದ್ಧೇಶ್ವರ ಸ್ವಾಮೀಜಿ-೩೨, ಉಷಾ ಪಾಲಾಕ್ಷಪ್ಪ-೬೨ ಒಟ್ಟು=೬

೪೫.ಆನು : ಯುಗಟಿ-೪೫, ಬಾಗಿ-೨೫, ಸಿದ್ದಪ್ಪಾರಾಧ್ಯ-೨೭, ಮೆನೆಜಿಸ್-ಅಂಗಡಿ-೪೫,
ಶ್ರೀಸಿದ್ಧೇಶ್ವರ ಸ್ವಾಮೀಜಿ-೩೩, ಮಾತೆ ಮಹಾದೇವಿ-೭, ಮೂರುಶಿಳ್ಳಿ-೫,
ಉಷಾಪಾಲಾಕ್ಷಪ್ಪ-೨, ಒಟ್ಟು=೮

೪೬. ಆಸೆ : ಹಳಕಟ್ಟಿ-೧೨, ಯುಗಟಿ-೪೬, ಬಾಗಿ-೨೬, ಸಿದ್ದಪ್ಪಾರಾಧ್ಯ-೨೮, ಮೆನೆಜಿಸ್-
ಅಂಗಡಿ-೪೬, ಶ್ರೀಸಿದ್ಧೇಶ್ವರ ಸ್ವಾಮೀಜಿ-೩೪, ಉಷಾ ಪಾಲಾಕ್ಷಪ್ಪ-೧೩,
ಒಟ್ಟು=೭

೪೭. ಎಂತು ಶಿವಭಕ್ತಿ: ಹಳಕಟ್ಟಿ-೧೧, ಯುಗಟಿ-೪೭, ಬಾಗಿ-೨೭, ಸಿದ್ದಪ್ಪಾರಾಧ್ಯ-೨೯,
ಮೆನೆಜಿಸ್-ಅಂಗಡಿ-೪೭, ಶ್ರೀಸಿದ್ಧೇಶ್ವರ ಸ್ವಾಮೀಜಿ-೩೫, ಒಟ್ಟು=೬

೪೮. ಕಾಯವಿಕಾರ : ಯುಗಟಿ-೪೮,ಬಾಗಿ-೨೮,ಸಿದ್ದಪ್ಪಾರಾಧ್ಯ-೩೦,ಮೆನೆಜಿಸ್-ಅಂಗಡಿ-೪೮,
ಶ್ರೀಸಿದ್ಧೇಶ್ವರ ಸ್ವಾಮೀಜಿ-೩೬, ಒಟ್ಟು=೫

೪೯. ಬಂದ : ಯುಗಟಿ-೪೯, ಸಿದ್ದಪ್ಪಾರಾಧ್ಯ-೩೧, ಮೆನೆಜಿಸ್-ಅಂಗಡಿ-೪೯, ಒಟ್ಟು=೩

೫೦. ಬೆಳೆಯು : ಹಳಕಟ್ಟಿ-೧೩, ಮಾಸ್ತಿ-೧೯೮, ಬಸವನಾಳ-ಅಯ್ಯಂಗಾರ-೨೫, ಯುಗಟಿ೫೦, ಸಿದ್ಧಪ್ಪಾರಾಧ್ಯ-೩೨, ಮೆನೆಜಿಸ್-ಅಂಗಡಿ,-೫೦, ಶ್ರೀಸಿದ್ಧೇಶ್ವರ ಸ್ವಾಮೀಜಿ೪೧, ಶಿವಪ್ರಕಾಶ-ನಾಗಭೂಷಣ-೧೯, ವಿರುಪಾಕ್ಷಪ್ಪ-೪೬, ಉಷಾ ಪಾಲಾಕ್ಷಪ್ಪ೧೭.
ಒಟ್ಟು=೧೦

೫೧. ವಿಷಯು : ಹಳಕಟ್ಟಿ-೧೪,ಮಾಸ್ತಿ-೬೭, ಸಂಗನಾಳಮಠ-೪೮, ಬಸವನಾಳಅಯ್ಯಂಗಾರ೩೫, ಯುಗಟಿ-೫೧, ಬಾಗಿ-೨೯, ಪಿ.ಶಾಮರಾವ್-೧೦, ಮೆನೆಜಿಸ್-ಅಂಗಡಿ-೫೧, ಅನಂತನಾರಾಯಣ-೯, ಶ್ರೀಸಿದ್ಧೇಶ್ವರ ಸ್ವಾಮೀಜಿ-೩೮, ವಿರುಪಾಕ್ಷಪ್ಪ೧೦೨, ಉಷಾ ಪಾಲಾಕ್ಷಪ್ಪ-೯೪, ಶಿವಪ್ರಕಾಶ-ನಾಗಭೂಷಣ-೬೨, ಡಿ.ಎ.ಶಂಕರ೧೫, ದಿ.ಸೈನ್-೮೪
ಒಟ್ಟು=೧೫,

೫೨. ಕೆಸರಲ್ಲಿ : ಬಸವನಾಳ-ಅಯ್ಯಂಗಾರ-೨೫, ಯುಗಟಿ-೫೨, ಬಾಗಿ-೩೦, ಸಿದ್ಧಪ್ಪಾರಾಧ್ಯ೩೩, ಮೆನೆಜಿಸ್-ಅಂಗಡಿ-೫೨, ರಾಮಾನುಜನ್-೨, ಶ್ರೀಸಿದ್ಧೇಶ್ವರ ಸ್ವಾಮೀಜಿ೩೯, ಮೂರುಶಿಳ್ಳಿ-೬,ಶಿವಪ್ರಕಾಶ-ನಾಗಭೂಷಣ-೮೦, ಡೋಣೂರ೧, ಡಿ.ಎ.ಶಂಕರ೧೬, ಉಷಾ ಪಾಲಾಕ್ಷಪ್ಪ,-೪೧
ಒಟ್ಟು=೧೨

೫೩. ಬಡಪಶು : ಬಸವನಾಳ-ಅಯ್ಯಂಗಾರ-೭, ಯುಗಟಿ-೫೩, ಬಾಗಿ-೩೦, ಥಿಯೋಡೋರ್-ಹಕಾರಿ-೧೫, ಪಿ.ಶಾಮರಾವ್-೧೧೫, ಮೆನೆಜಿಸ್-ಅಂಗಡಿ-೫೩, ಸಿ.ಎನ್.ಹಿರೇಮಠ-೧೬, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೦, ಅನಂತನಾರಾಯಣ೩೮, ಡಿ.ಎ.ಶಂಕರ-೧೭
ಒಟ್ಟು=೧೦

೫೪. ಅಡವಿ : ಮಾಸ್ತಿ-೪,ಬಸವನಾಳ-ಅಯ್ಯಂಗಾರ-೫,ಯುಗಟಿ-೫೪, ಬಾಗಿ೩೧,ಪಿ. ಶಾಮರಾವ್-೩೮, ಸಿದ್ಧಪ್ಪಾರಾಧ್ಯ-೩೪, ಮೆನೆಜಿಸ್-ಅಂಗಡಿ-೫೪, ಶ್ರೀಸಿದ್ಧೇಶ್ವರ ಸ್ವಾಮೀಜಿ-೩೭, ಮಾತೆ ಮಹಾದೇವಿ-೫,
ಒಟ್ಟು=೯

೫೫. ಸಮುದ್ರ : ಹಳಕಟ್ಟಿ-೩, ಬಸವನಾಳ-ಅಯ್ಯಂಗಾರ-೧೦, ಯುಗಟಿ-೫೫, ಬಾಗಿ-೩೨, ಸಿದ್ಧಪ್ಪಾರಾಧ್ಯ-೩೫, ಮೆನೆಜಿಸ್-ಅಂಗಡಿ-೫೫,
ಒಟ್ಟು=೬

೫೬. ಅಯ್ಯಾ : ಮಾಸ್ತಿ-೧, ಯುಗಟಿ-೫೬,ಬಾಗಿ-೩೩, ಸಿದ್ಧಪ್ಪಾರಾಧ್ಯ-೩೬, ಮೆನೆಜಿಸ್-ಅಂಗಡಿ-೫೬, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೨, ಉಷಾ ಪಾಲಾಕ್ಷಪ್ಪ-೫,
ಒಟ್ಟು=೭

೫೭. ನೀ ಹುಟ್ಟಿಸಿ : ಮಾಸ್ತಿ-೨, ಯುಗಟಿ-೫೭,ಬಾಗಿ-೩೪, ಸಿದ್ಧಪ್ಪಾರಾಧ್ಯ-೩೭, ಮೆನೆಜಿಸ್-ಅಂಗಡಿ-೫೭, ಮೂರುಶಿಳ್ಳಿ,-೭, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೩, ಉಷಾ ಪಾಲಾಕ್ಷಪ್ಪ-೭೧,
ಒಟ್ಟು=೮

೫೮. ನರವಿಂಧ್ಯ : ಹಳಕಟ್ಟಿ-೧೫, ಯುಗಟಿ-೫೮, ಬಾಗಿ-೩೫, ಸಿದ್ಧಪ್ಪಾರಾಧ್ಯ-೩೮, ಮೆನೆಜಿಸ್-ಅಂಗಡಿ-೫೮, ವೆಲೆಬಿಲ್-೯, ಮಾತೆ ಮಹಾದೇವಿ-೨೪, ಡಿ.ಎ.ಶಂಕರ-೧೮, ಆರ್ಯಆಚಾರ್ಯ-೫,
ಒಟ್ಟು=೯

೫೯. ಅತ್ತಲಿತ್ತ : ಹಳಕಟ್ಟಿ-೧೬, ಮಾಸ್ತಿ-೯೨, ಸಂಗನಾಳಮಠ-೨೬ ಬಸವನಾಳಅಯ್ಯಂಗಾರ೨೨, ಯುಗಟಿ-೫೯, ಬಾಗಿ-೩೬,ಥಿಯೋಡೋರ್-ಹಕಾರಿ-೩೭, ಪಿ.ಶಾಮರಾವ್೪, ಮೆನೆಜಿಸ್-ಅಂಗಡಿ-೫೯, ರಾಮಾನುಜನ್-೩, ಸಿ.ಎನ್.ಹಿರೇಮಠ-೩೮, ಉಮಾಶಂಕರ-೭ ವೆಲೆಬಿಲ್-೧೦, ಕೆ.ಈಶ್ವರನ್-೨, ಶ್ರೀಸಿದ್ಧೇಶ್ವರ ಸ್ವಾಮೀಜಿ೪೪, ಮಾತೆ ಮಹಾದೇವಿ-೧೩, ಶಿವಪ್ರಕಾಶ-ನಾಗಭೂಷಣ-೨೦, ಡೋಣೂರ೭,

ಡಿ.ಎ.ಶಂಕರ-೧೯, ದಿ.ಸೈನ್-೨, ಉಷಾ ಪಾಲಾಕ್ಷಪ್ಪ-೧೫, ಜಿ.ಎಸ್.ಅಮೂರ೬, ಆರ್ಯರ್ ಆಚಾರ್ಯ-೬, ಒಟ್ಟು= ೨೩

೬೦. ಎನ್ನ ವಾಮ : ಯುಗಟಿ-೬೦, ಬಾಗಿ-೩೭, ಮೆನೆಜಿಸ್-ಅಂಗಡಿ-೬೦, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೫, ಮೂರುಶಿಳ್ಳಿ-೮, ವಿರುಪಾಕ್ಷಪ್ಪ-೨೦,ಉಷಾ ಪಾಲಾಕ್ಷಪ್ಪ-೧೦೮, ಒಟ್ಟು=೭

೬೧. ಸಟೆಯಿಲ್ಲ: ಯುಗಟಿ-೬೧,ಸಿದ್ಧಪ್ಪಾರಾಧ್ಯ-೩೯, ಮೆನೆಜಿಸ್-ಅಂಗಡಿ-೬೧, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೬, ಒಟ್ಟು=೪

೬೨. ಇವನಾರವ: ಹಳಕಟ್ಟಿ-೧೭, ಮಾಸ್ತಿ-೨೦೦, ಯುಗಟಿ- ೬೨,ಥಿಯೋಡೋರ್-ಹಕಾರಿ೬೨, ಮೆನೆಜಿಸ್-ಅಂಗಡಿ-೬೨, ರಾಮಾನುಜನ್-೪,ಸಿ.ಎನ್.ಹಿರೇಮಠ-೬೨, ವೆಲೆಬಿಲ್-೧೧,ಅನಂತನಾರಾಯಣ-೧೪, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೭, ಶಿವಪ್ರಕಾಶ-ನಾಗಭೂಷಣ-೨೧,ವಿರುಪಾಕ್ಷಪ್ಪ-೧೬, ಡಿ.ಎ.ಶಂಕರ-೨೦, ಉಷಾಪಾಲಾಕ್ಷಪ್ಪ-೨೯, ಒಟ್ಟು=೧೪

೬೩. ಹುಟ್ಟಿಂದು : ಹಳಕಟ್ಟಿ-೮, ಮಾಸ್ತಿ- ೧೦೨,ಯುಗಟಿ-೬೩, ಸಿದ್ಧಪ್ಪಾರಾಧ್ಯ-೪೦, ಮೆನೆಜಿಸ್-ಅಂಗಡಿ-೬೩, ಒಟ್ಟು=೫

೬೪. ಅಕಟಕಟಾ: ಹಳಕಟ್ಟಿ-೧೯, ಮಾಸ್ತಿ-೩, ಬಸವನಾಳ-ಅಯ್ಯಂಗಾರ-೨, ಯುಗಟಿ,-೬೪, ಬಾಗಿ-೩೮, ಪಿ.ಶಾಮರಾವ್-೧೧೮.ಸಿದ್ಧಪ್ಪಾರಾಧ್ಯ-೪೧, ಮೆನೆಜಿಸ್ ಅಂಗಡಿ೬೪, ರಾಮಾನುಜನ್-೫, ಅನಂತನಾರಾಯಣ-೨೨, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೮, ಶಿವಪ್ರಕಾಶ-ನಾಗಭೂಷಣ-೧, ಉಷಾ ಪಾಲಾಕ್ಷಪ್ಪ-೭ ಒಟ್ಟು=೧೩.

೬೫. ನರ ಕೂರಂಬಿ : ಹಳಕಟ್ಟಿ-೨೦, ಯುಗಟಿ-೬೫, ಮೆನೆಜಿಸ್-ಅಂಗಡಿ-೬೫, ಒಟ್ಟು=೩

೬೬.ನೀನೊಲಿದೊಡೆ: ಹಳಕಟ್ಟಿ-೨೨,ಮಾಸ್ತಿ-೫, ಸಂಗನಾಳಮಠ-೨೯, ಬಸವನಾಳಅಯ್ಯಂಗಾರ೭೮, ಯುಗಟಿ- ೬೬,ಬಾಗಿ-೩೯,ಥಿಯೋಡೋರ್-ಹಕಾರಿ,-೬, ಪಿ.ಶಾಮರಾವ್೧೧೭, ಮೆನೆಜಿಸ್-ಅಂಗಡಿ-೬೬, ಸಿ.ಎನ್.ಹಿರೇಮಠ-೭, ಅನಂತನಾರಾಯಣ-೭, ಶ್ರೀಸಿದ್ಧೇಶ್ವರ ಸ್ವಾಮೀಜಿ-೪೯,ಶಿವಪ್ರಕಾಶ-ನಾಗಭೂಷಣ-೧೮, ವಿರುಪಾಕ್ಷಪ್ಪ೧೩, ಡಿ.ಎ.ಶಂಕರ-೨೧, ದಿ.ಸೈನ್-೫೯,ಉಷಾಪಾಲಾಕ್ಷಪ್ಪ-೭೨,ಜಿ.ಎಸ್.ಅಮೂರ೧೦, ಆರ್ಯರ್ ಆಚಾರ್ಯ-೭, ಒಟ್ಟು=೧೯

೬೭. ಮೇರು : ಹಳಕಟ್ಟಿ-೨೩, ಯುಗಟಿ-೬೭, ಸಿದ್ಧಪ್ಪಾರಾಧ್ಯ-೪೨, ಮೆನೆಜಿಸ್-ಅಂಗಡಿ೬೭, ಶ್ರೀಸಿದ್ಧೇಶ್ವರ ಸ್ವಾಮೀಜಿ-೫೦, ಒಟ್ಟು=೫

೬೮. ಭವ ಭವದಲ್ಲಿ : ಯುಗಟಿ-೬೮, ಸಿದ್ಧಪ್ಪಾರಾಧ್ಯ-೪೩, ಮೆನೆಜಿಸ್-ಅಂಗಡಿ-೬೮, ಒಟ್ಟು=೩

೬೯ ಆಸೆಯೆಂಬ :ಸಂಗನಾಳಮಠ-೩೦,ಯುಗಟಿ-೬೯, ಬಾಗಿ-೪೦, ಸಿದ್ಧಪ್ಪಾರಾಧ್ಯ-೪೪, ಮೆನೆಜಿಸ್-ಅಂಗಡಿ-೬೯, ಶ್ರೀಸಿದ್ಧೇಶ್ವರಸ್ವಾಮೀಜಿ-೫೧, ಉಷಾ ಪಾಲಾಕ್ಷಪ್ಪ೧೪, ಒಟ್ಟು=೭

೭೦. ಮಡಕೆಯ: ಯುಗಟಿ-೭೦, ಬಾಗಿ-೪೧, ಪಿ.ಶಾಮರಾವ್-೧೦೨, ಸಿದ್ಧಪ್ಪಾರಾಧ್ಯ-೪೫, ಕೆ.ಈಶ್ವರನ್-೩, ಮೆನೆಜಿಸ್-ಅಂಗಡಿ-೭೦, ವಿರುಪಾಕ್ಷಪ್ಪ-೧೯,

ಡಿ.ಎ.ಶಂಕರ-೨೨, ಉಷಾ ಪಾಲಾಕ್ಷಪ್ಪ-೫೪, ಜಿ.ಎಸ್.ಆಮೂರ-೧೩,
ಒಟ್ಟು=೧೦

೭೧. ನೋಡಿ : ಸಂಗನಾಳಮಠ-೨೨, ಯುಗಟಿ-೭೧, ಸಿದ್ಧಪ್ಪಾರಾಧ್ಯ-೪೬, ಮೆನೆಜಿಸ್-ಅಂಗಡಿ-೭೧, ಉಷಾಪಾಲಾಕ್ಷಪ್ಪ- ೭೫, ಒಟ್ಟು=೫

೭೨. ಗುರುವಚನ : ಯುಗಟಿ-೭೨, ಸಿದ್ಧಪ್ಪಾರಾಧ್ಯ-೪೭, ಮೆನೆಜಿಸ್-ಅಂಗಡಿ-೭೨, ಒಟ್ಟು=೩

೭೩. ಮುನ್ನ : ಯುಗಟಿ-೭೩, ಸಿದ್ಧಪ್ಪಾರಾಧ್ಯ- ೪೮, ಮೆನೆಜಿಸ್-ಅಂಗಡಿ-೭೩, ಒಟ್ಟು=೩

೭೪. ನೀರಿಂಗೆ : ಸಂಗನಾಳಮಠ-೬೮, ಯುಗಟಿ-೭೪, ಸಿದ್ಧಪ್ಪಾರಾಧ್ಯ-೪೯, ಮೆನೆಜಿಸ್-ಅಂಗಡಿ-೭೪, ಅನಂತನಾರಾಯಣ-೬೧, ವಿರುಪಾಕ್ಷಪ್ಪ-೧೨, ಡಿ.ಎ.ಶಂಕರ೨೩, ದಿ.ಸೈನ್-೬೨. ಒಟ್ಟು=೮

೭೫. ಕರಿಯಂಜೂದು : ಸಂಗನಾಳಮಠ-೬೭, ಯುಗಟಿ-೭೫, ಸಿದ್ಧಪ್ಪಾರಾಧ್ಯ-೫೦, ಮೆನೆಜಿಸ್-ಅಂಗಡಿ-೭೫, ಅನಂತನಾರಾಯಣ-೩೫, ವಿರುಪಾಕ್ಷಪ್ಪ-೩೯, ಮೂರುಶಿಳ್ಳಿ೯,
ಒಟ್ಟು=೭

೭೬. ಜಪತಪ : ಯುಗಟಿ-೭೬, ಸಿದ್ಧಪ್ಪಾರಾಧ್ಯ-೫೧, ಮೆನೆಜಿಸ್-ಅಂಗಡಿ-೭೬, ಒಟ್ಟು=೩

೭೭. ಅಕಟಕಟಾ : ಯುಗಟಿ-೭೭, ಸಿದ್ಧಪ್ಪಾರಾಧ್ಯ-೫೨, ಮೆನೆಜಿಸ್-ಅಂಗಡಿ-೭೭, ಒಟ್ಟು=೩

೭೮. ವಶ್ಯವ : ಯುಗಟಿ-೭೮, ಮೆನೆಜಿಸ್-ಅಂಗಡಿ-೭೮, ಒಟ್ಟು=೨

೭೯. ಭವ ಬಂಧನ : ಯುಗಟಿ-೭೯, ಮೆನೆಜಿಸ್-ಅಂಗಡಿ-೭೯, ವೆಲೆಬಿಲ್-೧೨, ಒಟ್ಟು=೩

೮೦. ಎನ್ನ ಮನದ : ಯುಗಟಿ-೮೦, ಮೆನೆಜಿಸ್-ಅಂಗಡಿ-೮೦, ಅನಂತನಾರಾಯಣ-೪, ಮೂರುಶಿಳ್ಳಿ-೧೦,ಉಷಾ ಪಾಲಾಕ್ಷಪ್ಪ-೧೦೫, ಒಟ್ಟು=೫

೮೧. ಓಂ ನಮಃ: ಯುಗಟಿ-೮೧, ಮೆನೆಜಿಸ್-ಅಂಗಡಿ-೮೧, ಯರವಿನತೆಲಿಮಠ-೩ ಒಟ್ಟು=೩

೮೨. ಬಿಳಿಯ : ಯುಗಟಿ-೮೨, ಮೆನೆಜಿಸ್-ಅಂಗಡಿ-೮೨, ಒಟ್ಟು=೨

೮೩. ಎಮ್ಮವರು : ಯುಗಟಿ-೮೩, ಥಿಯೋಡೋರ-ಹಕಾರಿ-೨೩, ಮೆನೆಜಿಸ್-ಅಂಗಡಿ-೮೩, ಕೆ.ಈಶ್ವರನ್-೪, ಶಿವಪ್ರಕಾಶ-ನಾಗಭೂಷಣ-೪೧, ದಿ ಸೈನ್-೧೭ ಆರ್ಯ ಆಚಾರ್ಯ-೮, ಒಟ್ಟು=೭

೮೪. ಪಾತಕ : ಯುಗಟಿ-೮೪, ಮೆನೆಜಿಸ್-ಅಂಗಡಿ-೮೪, ಮೂರುಶಿಳ್ಳಿ-೧೧, ಒಟ್ಟು=೩

೮೫. ಲಿಂಗದ : ಯುಗಟಿ-೮೫, ಮೆನೆಜಿಸ್-ಅಂಗಡಿ-೮೫, ಒಟ್ಟು=೨

೮೬. ನಮಃ ಶಿವಾಯ : ಯುಗಟಿ-೮೬, ಬಾಗಿ-೧, ಮೆನೆಜಿಸ್-ಅಂಗಡಿ-೮೬, ಒಟ್ಟು=೩

೮೭. ಅಡ್ಡ ವಿಭೂತಿ : ಯುಗಟಿ-೮೭, ಮೆನೆಜಿಸ್-ಅಂಗಡಿ-೮೭, ಒಟ್ಟು=೨

೮೮. ಅಡ್ಡ ತ್ರಿಪುಂಡ್ರ : ಯುಗಟಿ-೮೮, ಮೆನೆಜಿಸ್-ಅಂಗಡಿ-೮೮, ಒಟ್ಟು=೨

೮೯. ಆರಾಧ್ಯ : ಯುಗಟಿ-೮೯, ಮೆನೆಜಿಸ್-ಅಂಗಡಿ-೮೯, ಒಟ್ಟು=೨

೯೦. ತಾಳ : ಯುಗಟಿ-೯೦, ಸಿದ್ಧಪ್ಪಾರಾಧ್ಯ-೫೩, ಮೆನೆಜಿಸ್-ಅಂಗಡಿ,-೯೦, ಮೂರುಶಿಳ್ಳಿ೧೨ ದಿ.ಸೈನ್-೫೦, ಒಟ್ಟು=೫

೯೧. ಸುಪಥ : ಯುಗಟಿ-೯೧, ಮೆನೆಜಿಸ್-ಅಂಗಡಿ-೯೧, ಒಟ್ಟು=೨

೯೨. ಕುಂಬಳದ : ಮಾಸ್ತಿ-೮೦, ಯುಗಟಿ-೯೨, ಸಿದ್ಧಪ್ಪಾರಾಧ್ಯ-೫೪, ಮೆನೆಜಿಸ್-ಅಂಗಡಿ೯೨, ರೊಮೆನೆಹಿಲ್ಲ-ಪ್ರಭುಶಂಕರ-೧೦, ಶಿವಪ್ರಕಾಶ-ನಾಗಭೂಷಣ೨, ಡಿ.ಎ.ಶಂಕರ೨೪, ಒಟ್ಟು=೭

೯೩. ಸಗಣೆಯ : ಮಾಸ್ತಿ–೮೧, ಯುಗಟ–೯೩, ಪಿ.ಶಾಮರಾವ್–೩೨, ಸಿದ್ಧಪ್ಪಾರಾಧ್ಯ–೫೫, ಮೆನೆಜಿಸ್–ಅಂಗಡಿ–೯೩. ವಿರುಪಾಕ್ಷಪ್ಪ–೯೭, ಶಿವಪ್ರಕಾಶ–ನಾಗಭೂಷಣ೧೬, ಡಿ.ಎ.ಶಂಕರ–೨೫, ದಿ.ಸೈನ್–೮೯, ಆರ್ಯ ಆಚಾರ್ಯ–೯, ಒಟ್ಟು=೧೦

೯೪. ಕಬ್ಬುನದ : ಯುಗಟ–೯೪, ಸಿದ್ಧಪ್ಪಾರಾಧ್ಯ–೫೬, ಮೆನೆಜಿಸ್–ಅಂಗಡಿ–೯೪, ಶಿವಪ್ರಕಾಶ–ನಾಗಭೂಷಣ–೭, ಡಿ.ಎ.ಶಂಕರ–೨೬, ಒಟ್ಟು=೫

೯೫. ತನುವಿನ : ಯುಗಟ–೯೫, ಸಿದ್ಧಪ್ಪಾರಾಧ್ಯ–೫೭, ಮೆನೆಜಿಸ್–ಅಂಗಡಿ–೯೫, ಒಟ್ಟು=೩

೯೬. ಒಳಗೆ : ಮಾಸ್ತಿ–೭೫, ಯುಗಟ–೯೬, ಬಾಗಿ–೪೨, ಸಿದ್ಧಪ್ಪಾರಾಧ್ಯ–೫೮, ಮೆನೆಜಿಸ್–ಅಂಗಡಿ–೯೬, ವಿರುಪಾಕ್ಷಪ್ಪ–೯೭ ಒಟ್ಟು=೬

೯೭. ಮನೆಯೊಳಗೆ : ಹಳಕಟ್ಟಿ–೨೯, ಮಾಸ್ತಿ–೧೦೮, ಬಸವನಾಳಅಯ್ಯಂಗಾರ೬೬, ಯುಗಟ೯೭, ಥಿಯೋಡೋರ–ಹಕಾರಿ–೧೧, ಸಿದ್ಧಪ್ಪಾರಾಧ್ಯ–೫೯ಪಿ.ಶಾಮರಾವ್–೩೦, ಮೆನೆಜಿಸ್–ಅಂಗಡಿ–೯೭, ರಾಮಾನುಜನ್–೬, ಸಿ.ಎನ್.ಹಿರೇಮಠ–೧೧, ವೆಲೆಬಿಲ್–೧೩, ಅನಂತನಾರಾಯಣ–೧೭, ಪ್ರಧಾನ ಗುರುದತ್ತ–೧, ರೊವೆನೆಹಿಲ್ಲ–ಪ್ರಭುಶಂಕರ–೩ ಶಿವಪ್ರಕಾಶನಾಗಭೂಷಣ೬೧, ವಿರುಪಾಕ್ಷಪ್ಪ೧೭, ಡಿ.ಎ.ಶಂಕರ–೨೭, ದಿ.ಸೈನ್–೭೫,ಉಷಾ ಪಾಲಾಕ್ಷಪ್ಪ–೬೦, ಜಿ.ಎಸ್.ಅಮೂರ೮, ಆರ್ಯ ಆಚಾರ್ಯ–೧೦, ಒಟ್ಟು=೨೧

೯೮. ಓಡೆತ್ತ : ಯುಗಟ–೯೮, ಪಿ.ಶಾಮರಾವ್–೮೯, ಸಿದ್ಧಪ್ಪಾರಾಧ್ಯ–೬೦, ಮೆನೆಜಿಸ್–ಅಂಗಡಿ–೯೮ ವೆಲೆಬಿಲ್–೧೪, ಮೂರುಶಿಳ್ಳಿ–೧೩, ಶಿವಪ್ರಕಾಶ–ನಾಗಭೂಷಣ೭೦, ದಿ.ಸೈನ್–೨೫, ಒಟ್ಟು=೮

೯೯. ಎನಿಸು ಕಾಲ: ಮಾಸ್ತಿ–೭೬, ಬಸವನಾಳ–ಅಯ್ಯಂಗಾರ–೫೨, ಯುಗಟ–೯೯, ಬಾಗಿ–೪೩, ಸಿದ್ಧಪ್ಪಾರಾಧ್ಯ–೬೧, ಪಿ.ಶಾಮರಾವ್–೪೦, ಮೆನೆಜಿಸ್–ಅಂಗಡಿ–೯೯, ರಾಮಾನುಜನ್–೭, ವೆಲೆಬಿಲ್–೧೫, ಅನಂತ ನಾರಾಯಣ–೩೩, ವಿರುಪಾಕ್ಷಪ್ಪ–೧೦೪, ಡಿ.ಎ.ಶಂಕರ–೨೮, ದಿ.ಸೈನ್–೧೬, ಉಷಾ ಪಾಲಾಕ್ಷಪ್ಪ೧೦೪, ಆರ್ಯ ಆಚಾರ್ಯ–೧೧, ಒಟ್ಟು=೧೫

೧೦೦. ಸಂತವಿದ್ದ: ಯುಗಟ– ೧೦೦, ಮೆನೆಜಿಸ್–ಅಂಗಡಿ–೧೦೦, ಒಟ್ಟು=೨

೧೦೧.ಕೂಸುಳ್ಳ: ಯುಗಟ–೧೦೧, ಸಿದ್ಧಪ್ಪಾರಾಧ್ಯ–೬೨, ಮೆನೆಜಿಸ್–ಅಂಗಡಿ–೧೦೧ ರಾಮಾನುಜನ್–೧೮, ರೊವೆನೆಹಿಲ್ಲ–ಪ್ರಭುಶಂಕರ–೨೨, ಶಿವಪ್ರಕಾಶ–ನಾಗಭೂಷಣ–೨೬, ವೆಲೆಬಿಲ್–೧೬, ಒಟ್ಟು=೭

೧೦೨. ಎರದೆಲೆ: ಯುಗಟ– ೧೦೨, ಸಿದ್ಧಪ್ಪಾರಾಧ್ಯ–೬೩, ಮೆನೆಜಿಸ್–ಅಂಗಡಿ–೧೦೨, ಮೆನೆಜಿಸ್–ಅಂಗಡಿ–೧೦೨, ಒಟ್ಟು=೪

೧೦೩. ಭಕ್ತರ ಕಂಡಡೆ : ಯುಗಟ–೧೦೩, ಮೆನೆಜಿಸ್–ಅಂಗಡಿ–೧೦೩, ಕೆ.ಈಶ್ವರನ್–೫, ಮೂರುಶಿಳ್ಳಿ–೧೫, ದಿ.ಸೈನ್–೭೦, ಒಟ್ಟು=೫

೧೦೪.ಗಂಡ ಶಿವಲಿಂಗ : ಹಳಕಟ್ಟಿ–೫೭, ಯುಗಟ–೧೦೪, ಪಿ.ಶಾಮರಾವ್–೧೧೯, ಸಿದ್ಧಪ್ಪಾರಾಧ್ಯ೬೪ ಮೆನೆಜಿಸ್–ಅಂಗಡಿ–೧೦೪, ಮೂರುಶಿಳ್ಳಿ–೧೫,ದಿ.ಸೈನ್–೩೭, ಆರ್ಯ ಆಚಾರ್ಯ–೧೨, ಒಟ್ಟು=೮

೧೦೫. ಹಾವಡಿಗನು : ಹಳಕಟ್ಟಿ–೧೦೦, ಮಾಸ್ತಿ–೨೩೦, ಯುಗಟ–೧೦೫, ಪಿ.ಶಾಮರಾವ್–೯೯, ಮೆನೆಜಿಸ್–ಅಂಗಡಿ–೧೦೫, ರಾಮಾನುಜನ್–೧೯, ವೆಲೆಬಿಲ್–೧೭,

ಶಿವಪ್ರಕಾಶ ನಾಗಭೂಷಣ-೯೨,ವಿರುಪಾಕ್ಷಪ್ಪ-೩೭,ಆರ್ಯ ಆಚಾರ್ಯ-೧೩, ಒಟ್ಟು=೧೦

೧೦೬. ಅಂಗದಿಚ್ಚೆಗೆ : ಮಾಸ್ತಿ-೮೨, ಯುಗಟಿ- ೧೦೬, ಥಿಯೋಡೋರ-ಹಕಾರಿ-೫೧, ಮೆನೆಜಿಸ್-ಅಂಗಡಿ-೧೦೬, ಸಿ.ಎನ್.ಹಿರೇಮಠ-೪೬, ವಿರುಪಾಕ್ಷಪ್ಪ-೯, ಒಟ್ಟು=೬

೧೦೭. ಶಿವಜನ್ಮದಲ್ಲಿ : ಯುಗಟಿ-೧೦೭, ಸಿದ್ಧಪ್ಪಾರಾಧ್ಯ-೬೫, ಮೆನೆಜಿಸ್-ಅಂಗಡಿ-೧೦೭ ಒಟ್ಟು=೩

೧೦೮. ಅರ್ಥರೇಖೆಯಿದ್ದಲ್ಲಿ: ಯುಗಟಿ-೧೦೮,ಮೆನೆಜಿಸ್-ಅಂಗಡಿ-೧೦೮, ಸಿ.ಎನ್.ಹಿರೇಮಠ೨೩, ಉಷಾ ಪಾಲಾಕ್ಷಪ್ಪ-೧೨, ಆರ್ಯ ಆಚಾರ್ಯ-೧೪ ಒಟ್ಟು=೫

೧೦೯. ಗಂಡನ ಮೇಲೆ : ಮಾಸ್ತಿ-೮೩,ಯುಗಟಿ-೧೦೯,ಪಿ.ಶಾಮರಾವ್-೫೨,ಸಿದ್ಧಪ್ಪಾರಾಧ್ಯ೬೬, ಮೆನೆಜಿಸ್-ಅಂಗಡಿ-೧೦೯,ಕೆ.ಈಶ್ವರನ್-೬,ವಿರುಪಾಕ್ಷಪ್ಪ-೧೦೬, ಮೂರುಶಿಳ್ಳಿ-೧೬, ದಿ.ಸೈನ್-೩೮ ಒಟ್ಟು=೯

೧೧೦. ಅವಳ ವಚನ : ಸಂಗನಾಳಮಠ-೬೬,ಯುಗಟಿ-೧೧೦,ಬಾಗಿ-೪೪, ಸಿದ್ಧಪ್ಪಾರಾಧ್ಯ-೬೭, ಮೆನೆಜಿಸ್ಅಂಗಡಿ-೧೧೦, ವೆಲೆಬಿಲ್-೧೮, ರೊವೆನೆಹಿಲ್ಲ-ಪ್ರಭುಶಂಕರ-೨೧, ಡಿ.ಎ.ಶಂಕರ-೨೯, ಒಟ್ಟು=೮

೧೧೧. ಹಾದರಕ್ಕೆ: ಯುಗಟಿ-೧೧೧, ಮೆನೆಜಿಸ್-ಅಂಗಡಿ-೧೧೧, ರಾಮಾನುಜನ್-೨೦, ವೆಲೆಬಿಲ್-೧೯, ಶಿವಪ್ರಕಾಶ-ನಾಗಭೂಷಣ-೧೭, ಡಿ.ಎ.ಶಂಕರ-೩೦, ದಿ.ಸೈನ್-೯೪ ಒಟ್ಟು=೭

೧೧೨. ಗರಿ ತೋರೆ : ಯುಗಟಿ-೧೧೨, ಮೆನೆಜಿಸ್-ಅಂಗಡಿ-೧೧೨ ಒಟ್ಟು=೨

೧೧೩. ಅಳಿವುತ್ತ : ಯುಗಟಿ-೧೧೩, ಪಿ.ಶಾಮರಾವ್-೫೩,ಸಿದ್ಧಪ್ಪಾರಾಧ್ಯ-೬೮,ಕೆ.ಈಶ್ವರನ್-೭, ಮೆನೆಜಿಸ್-ಅಂಗಡಿ-೧೧೩,ಅನಂತನಾರಾಯಣ-೬೦, ಡಿ.ಎ.ಶಂಕರ-೩೧, ದಿ.ಸೈನ್-೪. ಒಟ್ಟು=೮

೧೧೪. ಒಲೆಯು ಬೂದಿ : ಯುಗಟಿ-೧೧೪, ಪಿ.ಶಾಮರಾವ್-೯೮, ಮೆನೆಜಿಸ್-ಅಂಗಡಿ-೧೧೪, ಒಟ್ಟು=೩

೧೧೫. ಧರಣಿಯು: ಯುಗಟಿ-೧೧೫,ಥಿಯೋಡೋರ-ಹಕಾರಿ-೯, ಮೆನೆಜಿಸ್-ಅಂಗಡಿ-೧೧೫, ವಿರುಪಾಕ್ಷಪ್ಪ-೧೦೩,ಶಿವಪ್ರಕಾಶ-ನಾಗಭೂಷಣ-೪೬,ಡಿ.ಎ.ಶಂಕರ-೩೨, ದಿ.ಸೈನ್-೫೫ ಒಟ್ಟು=೭

೧೧೬. ನಂಬರು ಮಾಸ್ತಿ-೮,ಹಳಕಟ್ಟಿ-೬೬, ಯುಗಟಿ- ೧೧೬, ಬಾಗಿ-೪೫, ಥಿಯೋಡೋರ-ಹಕಾರಿ-೭, ಮೆನೆಜಿಸ್-ಅಂಗಡಿ-೧೧೬,ಸಿ.ಎನ್.ಹಿರೇಮಠ-೮,ವಿರುಪಾಕ್ಷಪ್ಪ-೨೫, ಡಿ.ಎ.ಶಂಕರ ೩೩,ಕೆ.ಈಶ್ವರನ್-೬೮, ಒಟ್ಟು=೧೦

೧೧೭. ಹುತ್ತವ ಬಡಿದಡೆ : ಸಂಗನಾಳಮಠ-೫೩, ಯುಗಟಿ-೧೧೭,ಬಾಗಿ-೪೬, ಥಿಯೋಡೋರ-ಹಕಾರಿ-೬೮ ಪಿ.ಶಾಮರಾವ್-೯೦,ಸಿದ್ಧಪ್ಪಾರಾಧ-೬೯, ಯಮುನಾಚಾರ-೨೫ ಮೆನೆಜಿಸ್-ಅಂಗಡಿ-೧೧೭,ಸಿ.ಎನ್.ಹಿರೇಮಠ-೭೦,ವೆಲೆಬಿಲ್-೨೦, ಕೆ.ಈಶ್ವರನ್-೮, ಅನಂತ ನಾರಾಯಣ-೨೯,ರೊವೆನೆಹಿಲ್ಲ-ಪ್ರಭುಶಂಕರ-೧೩, ವಿರುಪಾಕ್ಷಪ್ಪ-೨೯,ಶಿವಪ್ರಕಾಶ-ನಾಗಭೂಷಣ-೮೯,ಉಷಾ ಪಾಲಾಕ್ಷಪ್ಪ-೩೮, ಆರ್ಯ ಆಚಾರ್ಯ-೧೫, ಒಟ್ಟು=೧೭.

೧೧೮. **ಕಾಮವೇಕೋ** : ಯುಗಟಿ-೧೧೮, ಥಿಯೋಡೋರ್-ಹಕಾರಿ-೧೦, ಮೆನೆಜಿಸ್-
ಅಂಗಡಿ-೧೧೮, ಒಟ್ಟು=೩

೧೧೯. **ಸಾರ ಸಜ್ಜನರ**: ಯುಗಟಿ-೧೧೯, ಬಾಗಿ-೪೭, ಸಿದ್ಧಪ್ಪಾರಾಧ್ಯ-೭೦, ಮೆನೆಜಿಸ್-
ಅಂಗಡಿ-೧೧೯, ವಿರುಪಾಕ್ಷಪ್ಪ-೪೫, ಮೂರುಶಿಳ್ಳಿ-೧೯ ಒಟ್ಟು=೫

೧೨೦.**ಹಸಿದು ಎಕ್ಕೆಯು**: ಯುಗಟಿ-೧೨೦, ಸಿದ್ಧಪ್ಪಾರಾಧ್ಯ-೭೧, ಮೆನೆಜಿಸ್-ಅಂಗಡಿ-೧೨೦
ಒಟ್ಟು=೩

೧೨೧. **ಎಲವದ ಮರ** : ಯುಗಟಿ-೧೨೧, ಸಿದ್ಧಪ್ಪಾರಾಧ್ಯ-೭೨, ಮೆನೆಜಿಸ್-ಅಂಗಡಿ-೧೨೧,
ಒಟ್ಟು=೩

೧೨೨. **ಬಚ್ಚಲ ನೀರು** : ಯುಗಟಿ-೧೨೨, ಸಿದ್ಧಪ್ಪಾರಾಧ್ಯ- ೭೫,ಮೆನೆಜಿಸ್-ಅಂಗಡಿ-೧೨೨,
ವಿರುಪಾಕ್ಷಪ್ಪ-೮೧,ಮೂರುಶಿಳ್ಳಿ-೨೦ ಒಟ್ಟು=೫

೧೨೩. **ಗಿಳಿಯೋದಿ** : ಯುಗಟಿ-೧೨೩, ಪಿ.ಶಾಮರಾವ್-೫೪, ಸಿದ್ಧಪ್ಪಾರಾಧ್ಯ-೭೩, ಮೆನೆಜಿಸ್-
ಅಂಗಡಿ-೧೨೩, ವಿರುಪಾಕ್ಷಪ್ಪ-೩೧,ಮೂರುಶಿಳ್ಳಿ-೨೧, ಶಿವಪ್ರಕಾಶ-
ನಾಗಭೂಷಣ-೪೪, ದಿ.ಸೈನ್-೪೦, ಆರ್ಯ ಆಚಾರ್ಯ-೧೬ ಒಟ್ಟು=೯

೧೨೪.**ಲೋಕದ ಡೊಂಕ** : ಹಳಕಟ್ಟಿ-೨೭, ಮಾಸ್ತಿ-೨೩೧,ಬಸವನಾಳ-ಅಯ್ಯಂಗಾರ-೩೯,
ಯುಗಟಿ-೧೨೪, ಬಾಗಿ-೪೮,ಪಿ.ಶಾಮರಾವ್-೩೧, ಯಮುನಾಚಾರ-೨೨,
ಮೆನೆಜಿಸ್-ಅಂಗಡಿ-೧೨೪, ಸಿ.ಎನ್.ಹಿರೇಮಠ-೪೯, ರೊವೆನೆಹಿಲ್ಲ-
ಪ್ರಭುಶಂಕರ-೬೭, ಶಿವಪ್ರಕಾಶ/ನಾಗಭೂಷಣ ೮೮, ವಿರುಪಾಕ್ಷಪ್ಪ-೫,
ಡೋಣೂರ-೩, ಡಿ.ಎ.ಶಂಕರ-೩೪, ಉಷಾ ಪಾಲಾಕ್ಷಪ್ಪ-೫೩ ಒಟ್ಟು=೧೪

೧೨೫. **ಏತ ತಲೆವಾಗಿದ** : ಮಾಸ್ತಿ-೧೨೧, ಯುಗಟಿ-೧೨೫, ಸಿದ್ಧಪ್ಪಾರಾಧ್ಯ-೭೪, ಮೆನೆಜಿಸ್-
ಅಂಗಡಿ-೧೨೫, ರಾಮಾನುಜನ್-೨೧, ವೆಲೆಬಿಲ್-೨೧, ಪ್ರಧಾನ ಗುರುದತ್ತ-೫,
ಶಿವಪ್ರಕಾಶ-ನಾಗಭೂಷಣ-೭೨, ದಿ.ಸೈನ್-೧೯, ಆರ್ಯ ಆಚಾರ್ಯ-೧೭,
ಒಟ್ಟು=೧೦

೧೨೬. **ಒಲವಿಲ್ಲದ** : ಯುಗಟಿ-೧೨೬, ಬಾಗಿ-೪೯, ಥಿಯೋಡೋರ-ಹಕಾರಿ,-೧೭, ಮೆನೆಜಿಸ್-
ಅಂಗಡಿ-೧೨೬, ವೆಲೆಬಿಲ್-೨೨, ರೊವೆನೆಹಿಲ್ಲ-ಪ್ರಭುಶಂಕರ-೧೪, ದಿ.ಸೈನ್ -೨೪,
ಉಷಾ ಪಾಲಾಕ್ಷಪ್ಪ-೯೫, ಆರ್ಯ ಆಚಾರ್ಯ-೧೮ ಒಟ್ಟು=೯

೧೨೭. **ಸ್ನೇಹ ತಪ್ಪಿದ** : ಯುಗಟಿ-೧೨೭, ಸಿದ್ಧಪ್ಪಾರಾಧ್ಯ-೭೭, ಮೆನೆಜಿಸ್-ಅಂಗಡಿ-೧೨೭,
ಮೂರುಶಿಳ್ಳಿ-೨೨ ಒಟ್ಟು=೪

೧೨೮. **ಆಸೆಗೆ ಹುಟ್ಟಿದ** : ಯುಗಟಿ-೧೨೮, ಸಿದ್ಧಪ್ಪಾರಾಧ್ಯ-೭೬, ಮೆನೆಜಿಸ್-ಅಂಗಡಿ-೧೨೮
ಒಟ್ಟು=೩

೧೨೯. **ಹಬ್ಬಕ್ಕೆ ತಂದ**: ಮಾಸ್ತಿ-೬,ಬಸವನಾಳ-ಅಯ್ಯಂಗಾರ-೧೪,ಯುಗಟಿ-೧೨೯, ಥಿಯೋ
ಡೋರ್-ಹಕಾರಿ-೯೩ ಪಿ.ಶಾಮರಾವ್-೫೫, ಮೆನೆಜಿಸ್-ಅಂಗಡಿ-೧೨೯,
ರಾಮಾನುಜನ್-೨೨, ಸಿ.ಎನ್.ಹಿರೇಮಠ-೯೨, ಉಮಾಶಂಕರ-೧೩೦,
ಅನಂತನಾರಾಯಣ-೪೦, ಬೋಂದಾಡೆ-೧೫, ರೊವೆನೆಹಿಲ್ಲ-ಪ್ರಭುಶಂಕರ-೨೬,
ಶಿವಪ್ರಕಾಶ-ನಾಗಭೂಷಣ-೬೩, ವಿರುಪಾಕ್ಷಪ್ಪ-೯೨, ಡೋಣೂರ-೧೫,
ಡಿ.ಎ.ಶಂಕರ-೩೫, ದಿ.ಸೈನ್-೯೩, ಜಿ.ಎಸ್.ಆಮೂರ-೧ ಒಟ್ಟು=೧೮

೧೩೦. ಹಾವಿನ ಬಾಯ: ಮಾಸ್ತಿ–೭,ಯುಗಟಿ–೧೩೦, ಬಾಗಿ–೫೦, ಥಿಯೋಡೋರ್–ಹಕಾರಿ೭೩, ಪಿ.ಶಾಮರಾವ್–೫೬, ಮೆನೆಜಿಸ್–ಅಂಗಡಿ–೧೩೦, ಜಿ.ಎಸ್.ಆಮೂರ–೪ ಒಟ್ಟು=೭

೧೩೧. ಅರ್ಥವಡಗದು: ಹಳಕಟ್ಟಿ–೨೮, ಯುಗಟಿ–೧೩೧, ಬಾಗಿ–೫೧, ಮೆನೆಜಿಸ್–ಅಂಗಡಿ–೧೩೧ ಒಟ್ಟು=೪

೧೩೨. ಹಾವು ತಿಂದವರ: ಮಾಸ್ತಿ–೧೨೨, ಯುಗಟಿ–೧೩೨, ಬಾಗಿ–೫೨, ಥಿಯೋಡೋರಹಕಾರಿ೫೭, ಶಾಮರಾವ್–೧೨೨, ಮೆನೆಜಿಸ್–ಅಂಗಡಿ–೧೩೨, ರಾಮಾನುಜನ್–೧೨, ಸಿ.ಎನ್.ಹಿರೇಮಠ–೫೮, ಅನಂತನಾರಾಯಣ–೪೫, ರೊವೆನೆಹಿಲ್ಲ–ಪ್ರಭುಶಂಕರ–೧೯, ಶಿವಪ್ರಕಾಶ–ನಾಗಭೂಷಣ–೩೬,ವಿರುಪಾಕ್ಷಪ್ಪ–೩೪, ಡಿ.ಎ.ಶಂಕರ–೩೬,ಡೋಣೂರ–೪, ದಿ.ಸ್ಯೆನ್–೯೮, ಉಷಾ ಪಾಲಾಕ್ಷಪ್ಪ–೩೩, ಆರ್ಯ ಆಚಾರ್ಯ–೧೯ ಒಟ್ಟು=೧೮

೧೩೩. ಅರೆ ಭಕ್ತರಾದವರ : ಹಳಕಟ್ಟಿ–೫೫, ಯುಗಟಿ–೧೩೩,ಸಿದ್ಧಪ್ಪಾರಾಧ್ಯ–೭೯,ಮೆನೆಜಿಸ್–ಅಂಗಡಿ–೧೩೩ ಮೂರುಶಿಳ್ಳಿ,–೨೩ ಒಟ್ಟು=೫

೧೩೪. ಸಾರ ಸಜ್ಜನರ : ಹಳಕಟ್ಟಿ–೫೪, ಯುಗಟ, ೧೩೪, ಬಾಗಿ–೫೩, ಸಿದ್ಧಪ್ಪಾರಾಧ್ಯ–೮೦, ಮೆನೆಜಿಸ್–ಅಂಗಡಿ–೧೩೪, ವಿರುಪಾಕ್ಷಪ್ಪ–೩೦ ,ಮೂರುಶಿಳ್ಳಿ,–೨೪ ಒಟ್ಟು=೭

೧೩೫. ಹೊಲೆಯ : ಯುಗಟಿ ೧೩೫, ಮೆನೆಜಿಸ್–ಅಂಗಡಿ–೧೩೫, ಯರವಿನತೆಲಿಮಠ–೨, ಡಿ.ಎ.ಶಂಕರ–೩೭ ಒಟ್ಟು=೪

೧೩೬. ದೂಷಕನವನೊಬ್ಬ : ಮಾಸ್ತಿ–೪೯, ಹಳಕಟ್ಟಿ–೫೬, ಯುಗಟಿ ೧೩೬, ಬಾಗಿ–೫೪, ಥಿಯೋಡೋರ–ಹಕಾರಿ–೭೨, ಮೆನೆಜಿಸ್–ಅಂಗಡಿ–೧೩೬, ವಿರುಪಾಕ್ಷಪ್ಪ೬೮, ಯರವಿನತೆಲಿಮಠ–೧, ಆರ್ಯ ಆಚಾರ್ಯ–೨೦ ಒಟ್ಟು=೯

೧೩೭. ಪರುಷ ಮುಟ್ಟಿದ : ಹಳಕಟ್ಟಿ–೨೫, ಯುಗಟಿ–೧೩೭, ಸಿದ್ಧಪ್ಪಾರಾಧ್ಯ–೮೧, ಮೆನೆಜಿಸ್–ಅಂಗಡಿ–೧೩೭ ಒಟ್ಟು=೪

೧೩೮. ಪಟ್ಟವ ಕಟ್ಟಿದ : ಹಳಕಟ್ಟಿ–೧೦೧, ಯುಗಟಿ–೧೩೮, ಸಿದ್ಧಪ್ಪಾರಾಧ್ಯ–೮೨, ಮೆನೆಜಿಸ್–ಅಂಗಡಿ–೧೩೮, ವೆಲೆಬಿಲ್–೨೩, ಕೆ.ಈಶ್ವರನ್–೯, ಮೂರುಶಿಳ್ಳಿ–೧೮ ಒಟ್ಟು=೭

೧೩೯. ದೇವಲೋಕ : ಹಳಕಟ್ಟಿ–೩೦, ಯುಗಟಿ–೧೩೯, ಬಾಗಿ–೫೫,ಸಿದ್ಧಪ್ಪಾರಾಧ್ಯ–೮೩, ಮೆನೆಜಿಸ್–ಅಂಗಡಿ–೧೩೯,ಸಿ.ಎನ್.ಹಿರೇಮಠ–೩೧,ಅನಂತನಾರಾಯಣ–೩೬, ವೆಲೆಬಿಲ್–೨೪, ಕೆ.ಈಶ್ವರನ್–೧೦,ಶಿವಪ್ರಕಾಶ–ನಾಗಭೂಷಣ–೧೧,ದಿ.ಸ್ಯೆನ್೫೪, ಉಷಾ ಪಾಲಾಕ್ಷಪ್ಪ–೨೪ ಒಟ್ಟು=೧೨

೧೪೦. ಕಟ್ಟಿದಿರಿನಲ್ಲಿ : ಯುಗಟಿ ೧೪೦, ಮೆನೆಜಿಸ್–ಅಂಗಡಿ–೧೪೦ ಒಟ್ಟು=೨

೧೪೧. ಆರಾರ ಸಂಗ : ಯುಗಟಿ–೧೪೧, ಮೆನೆಜಿಸ್–ಅಂಗಡಿ–೧೪೧ ಒಟ್ಟು=೨

೧೪೨. ಎಂತಹವನಾ: ಯುಗಟಿ–೧೪೨, ಮೆನೆಜಿಸ್–ಅಂಗಡಿ–೧೪೨, ಕೆ.ಈಶ್ವರನ್–೧೧, ಯರವಿನ ತೆಲಿಮಠ–೪, ಮೂರುಶಿಳ್ಳಿ–೨೫ ಒಟ್ಟು=೪

೧೪೩. ಓದಿದಡೇನು : ಹಳಕಟ್ಟಿ–೧೨೯ ಯುಗಟಿ– ೧೪೩, ಸಿದ್ಧಪ್ಪಾರಾಧ್ಯ–೮೪, ಮೆನೆಜಿಸ್–ಅಂಗಡಿ–೧೪೩, ಯರವಿನತೆಲಿಮಠ–೫ ಒಟ್ಟು=೫

೧೪೪. ಹಾವಿನ ಡೊಂಕು : ಯುಗಟ-೧೪೪, ಪಿ.ಶಾಮರಾವ್-೧೦೫,ಸಿದ್ಧಪ್ಪಾರಾಧ್ಯ-೮೫, ಮೆನೆಜಿಸ್-ಅಂಗಡಿ-೧೪೪, ರಾಮಾನುಜನ್-೧೩, ವೆಲೆಬಿಲ್-೨೫, ರೊವೆನೆಹಿಲ್ಲ-ಪ್ರಭುಶಂಕರ-೧೧, ದಿ.ಸೈನ್-೯೬, ಉಷಾ ಪಾಲಾಕ್ಷಪ್ಪ-೪೩ ಒಟ್ಟು=೯

೧೪೫. ಭಕ್ತನ ಮುಖ : ಹಳಕಟ್ಟಿ-೨೬,ಯುಗಟ-೧೪೫, ಸಿದ್ಧಪ್ಪಾರಾಧ್ಯ-೮೬, ಮೆನೆಜಿಸ್-ಅಂಗಡಿ-೧೪೫ ಒಟ್ಟು=೪

೧೪೬. ಭಕ್ತಿ ಎಂತಹ : ಯುಗಟ-೧೪೬, ಮೆನೆಜಿಸ್-ಅಂಗಡಿ-೧೪೬, ಪ್ರಧಾನ ಗುರುದತ್ತ-೭, ಒಟ್ಟು=೩

೧೪೭. ಮುನ್ನಿನವರು : ಯುಗಟ-೧೪೭, ಮೆನೆಜಿಸ್-ಅಂಗಡಿ-೧೪೭ ಒಟ್ಟು=೨

೧೪೮. ದೇವನೊಲ್ಲದ : ಹಳಕಟ್ಟಿ-೮೦, ಯುಗಟ-೧೪೮, ಸಿದ್ಧಪ್ಪಾರಾಧ್ಯ-೮೭, ಮೆನೆಜಿಸ್-ಅಂಗಡಿ-೧೪೮, ವೆಲೆಬಿಲ್-೨೬, ವಿರುಪಾಕ್ಷಪ್ಪಾ-೬೯ ಒಟ್ಟು=೬

೧೪೯. ನೆರೆ ನಂಬೋ : ಯುಗಟ-೧೪೯, ಮೆನೆಜಿಸ್-ಅಂಗಡಿ-೧೪೯ ಒಟ್ಟು=೨

೧೫೦. ಬಲ್ಲಿದರೊಡನೆ : ಯುಗಟ-೧೫೦, ಸಿದ್ಧಪ್ಪಾರಾಧ್ಯ-೮೮, ಮೆನೆಜಿಸ್-ಅಂಗಡಿ-೧೫೦, ಒಟ್ಟು=೩

೧೫೧. ಗಿರಿಗಳ ಮೇಲೆ : ಯುಗಟ-೧೫೧, ಸಿದ್ಧಪ್ಪಾರಾಧ್ಯ-೮೯, ಮೆನೆಜಿಸ್-ಅಂಗಡಿ-೧೫೧ ಒಟ್ಟು=೩

೧೫೨. ಪರುಷದ : ಯುಗಟ-೧೫೨, ಮೆನೆಜಿಸ್-ಅಂಗಡಿ-೧೫೨ ಒಟ್ಟು=೨

೧೫೩. ಗೀತವ ಬಲ್ಲಾತ : ಮಾಸ್ತಿ-೧೦, ಯುಗಟ-೧೫೩, ಬಾಗಿ-೫೬, ಸಿದ್ಧಪ್ಪಾರಾಧ್ಯ-೯೦ ಮೆನೆಜಿಸ್-ಅಂಗಡಿ-೧೫೩, ಕೆ.ಈಶ್ವರನ್-೧೨ ಒಟ್ಟು=೬

೧೫೪. ಲೇಸೆನಿಸಿಕೊಂಡು: ಯುಗಟ-೧೫೪, ಮೆನೆಜಿಸ್-ಅಂಗಡಿ-೧೫೪, ಉಷಾಪಾಲಾಕ್ಷಪ್ಪ-೫೨, ಆರ್ಯ ಆಚಾರ್ಯ-೨೧ ಒಟ್ಟು=೪

೧೫೫. ಮರ್ತ್ಯಲೋಕ : ಮಾಸ್ತಿ-೧೨,ಯುಗಟ-೧೫೫, ಬಾಗಿ-೫೭,ಮೆನೆಜಿಸ್-ಅಂಗಡಿ-೧೫೫, ಕೆ.ಈಶ್ವರನ್-೧೩, ಪಿ.ಬಿ.ದೇಸಾಯಿ-೧೯, ಅನಂತನಾರಾಯಣ-೧, ಮಾತೆ ಮಹಾದೇವಿ-೨೦, ರೊವೆನೆಹಿಲ್ಲ-ಪ್ರಭುಶಂಕರ-೨೦, ಶಿವಪ್ರಕಾಶ-ನಾಗಭೂಷಣ-೧೪, ಡಿ.ಎ.ಶಂಕರ-೩೮, ದಿ.ಸೈನ್-೭೮, ವಿರುಪಾಕ್ಷಪ್ಪಾ೪೭, ಉಷಾ ಪಾಲಾಕ್ಷಪ್ಪ-೬೧, ಆರ್ಯ ಆಚಾರ್ಯ-೨೨ ಒಟ್ಟು=೧೫

೧೫೬. ಶಿವಚಿಂತೆ : ಯುಗಟ-೧೫೬, ಸಿದ್ಧಪ್ಪಾರಾಧ್ಯ-೯೧, ಮೆನೆಜಿಸ್-ಅಂಗಡಿ-೧೫೬ ಒಟ್ಟು=೩

೧೫೭. ಹೊತ್ತಾರೆ : ಮಾಸ್ತಿ-೧೧, ಯುಗಟ-೧೫೭, ಸಿದ್ಧಪ್ಪಾರಾಧ್ಯ- ೯೨, ಮೆನೆಜಿಸ್-ಅಂಗಡಿ-೧೫೭ ಒಟ್ಟು=೩

೧೫೮. ವ್ಯಾಧನೊಂದು : ಯುಗಟ-೧೫೮, ಬಾಗಿ-೫೮, ಥಿಯೋಡೋರ-ಹಕಾರಿ-೭೦, ಮೆನೆಜಿಸ್-ಅಂಗಡಿ-೧೫೮, ಅನಂತನಾರಾಯಣ-೮,ಮಾತೆ ಮಹಾದೇವಿ-೨೧, ಶಿವಪ್ರಕಾಶ-ನಾಗಭೂಷಣ-೧೫,ಡಿ.ಎ.ಶಂಕರ-೩೯, ವಿರುಪಾಕ್ಷಪ್ಪಾ-೧೮, ದಿ.ಸೈನ್-೮೬, ಆರ್ಯ ಆಚಾರ್ಯ-೨೩ ಒಟ್ಟು=೧೧

೧೫೯. ಉತುಪತಿ : ಯುಗಟ-೧೫೯, ಸಿದ್ಧಪ್ಪಾರಾಧ್ಯ-೯೩, ಮೆನೆಜಿಸ್-ಅಂಗಡಿ -೧೫೯ ಒಟ್ಟು=೩

೧೬೦. **ಮನವೆ ಸರ್ಪ** : ಯುಗಟಿ-೧೬೦, ಸಿದ್ಧಪ್ಪಾರಾಧ್ಯ-೯೪, ಮೆನೆಜಿಸ್-ಅಂಗಡಿ-೧೬೦, ಅನಂತನಾರಾಯಣ-೨೭, ವೆಲೆಬಿಲ್-೨೭,ಮಾತೆ ಮಹಾದೇವಿ-೧೯, ಮೂರುಶಿಳ್ಳಿ-೨೬, ಶಿವಪ್ರಕಾಶ-ನಾಗಭೂಷಣ-೫೦, ದಿ.ಸೈನ್-೭೪, ಉಷಾ ಪಾಲಾಕ್ಷಪ್ಪ-೫೯ ಒಟ್ಟು=೧೦

೧೬೧. **ಸರೆ ಕೆನ್ನೆಗೆ**: ಇ.ಪಿ.ರೈಸ್-೧, ಯುಗಟಿ-೧೬೧, ಬಾಗಿ-೫೯, ಥಿಯೋಡೋರ- ಹಕಾರಿ೨೧, ಪಿ.ಶಾಮರಾವ್-೧೨೮, ಯಮುನಾಚಾರ-೧೪, ಮೆನೆಜಿಸ್-ಅಂಗಡಿ-೧೬೧, ರಾಮಾನುಜನ್-೧೪, ಸಿ.ಎನ್.ಹಿರೇಮಠ-೨೪,ವೆಲೆಬಿಲ್-೨೮, ಬೋಂದಾಡೆ-೧೨, ಅನಂತನಾರಾಯಣ-೨೬, ರೊಮೆನೆಹಿಲ್ಲ-ಪ್ರಭುಶಂಕರ-೧೨, ಮಾತೆ ಮಹಾದೇವಿ-೧೭, ಶಿವಪ್ರಕಾಶ-ನಾಗಭೂಷಣ-೧೨, ಡಿ.ಎ.ಶಂಕರ-೪೦, ದಿ.ಸೈನ್-೬೪, ವಿರುಪಾಕ್ಷಪ್ಪಾ-೭೬. ಉಷಾ ಪಾಲಾಕ್ಷಪ್ಪ-೭೦, ಜಿ.ಎಸ್. ಆಮೂರ-೧೪ ಆರ್ಯ ಆಚಾರ್ಯ-೨೪ ಒಟ್ಟು=೨೧

೧೬೨. **ನೀರ ಬೊಬ್ಬುಳಿಕೆಗೆ** : ಮಾಸ್ತಿ-೮೦, ಬಸವನಾಳ-ಅಯ್ಯಂಗಾರ-೫೪, ಯುಗಟಿ-೧೬೨, ಬಾಗಿ-೬೦,ಸಿದ್ಧಪ್ಪಾರಾಧ್ಯ-೯೫, ಮೆನೆಜಿಸ್-ಅಂಗಡಿ-೧೬೨, ರಾಮಾನುಜನ್-೧೫, ರೊಮೆನೆಹಿಲ್ಲ-ಪ್ರಭುಶಂಕರ-೬೪, ಶಿವಪ್ರಕಾಶ-ನಾಗಭೂಷಣ-೯೦,ದಿ.ಸೈನ್-೬೧

ಒಟ್ಟು=೧೦

೧೬೩. **ಹಂಜರ ಬಲ್ಲಿತ್ತು** : ಯುಗಟಿ-೧೬೩, ಸಿದ್ಧಪ್ಪಾರಾಧ್ಯ-೯೬, ಮೆನೆಜಿಸ್-ಅಂಗಡಿ-೧೬೩, ಶಿವಪ್ರಕಾಶ-ನಾಗಭೂಷಣ-೫೨, ದಿ.ಸೈನ್-೯೨. ಜಿ.ಎಸ್.ಆಮೂರ-೨

ಒಟ್ಟು=೬

೧೬೪. **ಸಂಸಾರ** : ಯುಗಟಿ-೧೬೪, ಬಾಗಿ-೬೧, ಪಿ.ಶಾಮರಾವ್-೧೩೧, ಸಿದ್ಧಪ್ಪಾರಾಧ್ಯ-೯೭, ಮೆನೆಜಿಸ್-ಅಂಗಡಿ-೧೬೪, ಅನಂತನಾರಾಯಣ-೧೨, ಮಾತೆ ಮಹಾದೇವಿ೧೮, ಮೂರುಶಿಳ್ಳಿ-೨೭, ಡಿ.ಎ.ಶಂಕರ-೪೧ ಒಟ್ಟು=೯

೧೬೫. **ಎಲೆ ಎಲೆ** : ಯುಗಟಿ-೧೬೫, ಬಾಗಿ-೬೨, ಸಿದ್ಧಪ್ಪಾರಾಧ್ಯ-೭೭೧, ಮೆನೆಜಿಸ್-ಅಂಗಡಿ೧೬೫, ಮೂರುಶಿಳ್ಳಿ-೨೮ ಒಟ್ಟು=೫

೧೬೬. **ಎಂತಕ್ಕೆ** : ಯುಗಟಿ- ೧೬೬, ಮೆನೆಜಿಸ್-ಅಂಗಡಿ-೧೬೬ ಒಟ್ಟು=೨

೧೬೭. **ಶಕುನವೆಂದೆಂಬೆ** : ಯುಗಟಿ- ೧೬೭, ಮೆನೆಜಿಸ್-ಅಂಗಡಿ,-೧೬೭ ಒಟ್ಟು=೨

೧೬೮. **ನಿಮಿಷದ ನಿಮಿಷ** : ಯುಗಟಿ, ೧೬೮, ಮೆನೆಜಿಸ್-ಅಂಗಡಿ-೧೬೮, ವೆಲೆಬಿಲ್-೨೯, ದಿ.ಸೈನ್-೧೦ ಒಟ್ಟು=೪

೧೬೯. **ಹರನೀವ** : ಯುಗಟಿ-೧೬೯, ಬಾಗಿ-೬೩, ಮೆನೆಜಿಸ್- ಅಂಗಡಿ-೧೬೯, ಆರ್ಯ ಆಚಾರ್ಯ-೨೫ ಒಟ್ಟು=೪

೧೭೦. **ಹೊಯ್ದಡೆ** : ಯುಗಟಿ-೧೭೦, ಮೆನೆಜಿಸ್-ಅಂಗಡಿ-೧೭೦, ಉಷಾಪಾಲಾಕ್ಷಪ್ಪ-೩೬

ಒಟ್ಟು=೩

೧೭೧. **ಆದ್ಯರ ವಚನ** : ಯುಗಟಿ-೧೭೧, ಥಿಯೋಡೋರ-ಹಕಾರಿ-೫೫, ಮೆನೆಜಿಸ್-ಅಂಗಡಿ-೧೭೧, ಸಿ.ಎನ್.ಹಿರೇಮಠ-೫೭, ಡಿ.ಎ.ಶಂಕರ-೪೨ ಒಟ್ಟು=೫

೧೭೨. **ಹೊತ್ತಾರೆ** : ಮಾಸ್ತಿ-೧೩, ಯುಗಟಿ-೧೭೨, ಮೆನೆಜಿಸ್-ಅಂಗಡಿ೧೭೨, ದಿ.ಸೈನ್೧೦೦

ಒಟ್ಟು=೪

೧೭೩. ಅಚ್ಚಿಗವೇಕಯ್ಯಾ : ಯುಗಟಿ-೧೭೩, ಸಿದ್ಧಪ್ಪಾರಾಧ್ಯ-೯೮, ಮೆನೆಜಿಸ್-ಅಂಗಡಿ-೧೭೩
ಒಟ್ಟು=೩

೧೭೪. ಅಂದು ಇಂದು : ಮಾಸ್ತಿ-೮೮, ಹಳಕಟ್ಟಿ-೯೭, ಯುಗಟಿ-೧೭೪, ಮೆನೆಜಿಸ್-ಅಂಗಡಿ೧೭೪, ಉಷಾ ಪಾಲಾಕ್ಷಪ್ಪ-೧ ಒಟ್ಟು=೪

೧೭೫. ಅಷ್ಟವಿಧಾರ್ಚನೆ : ಮಾಸ್ತಿ-೧೪, ಯುಗಟಿ-೧೭೫, ಸಿದ್ಧಪ್ಪಾರಾಧ್ಯ-೯೯, ಮೆನೆಜಿಸ್ ಅಂಗಡಿ-೧೭೫ ಒಟ್ಟು=೪

೧೭೬. ಆಳಿಗೊಂಡಹ : ಯುಗಟಿ-೧೭೬, ಸಿದ್ಧಪ್ಪಾರಾಧ್ಯ-೧೦೦, ಮೆನೆಜಿಸ್-ಅಂಗಡಿ-೧೭೬, ಉಷಾ ಪಾಲಾಕ್ಷಪ್ಪ-೮ ಒಟ್ಟು=೪

೧೭೭. ಸುಪ್ರಭಾತ : ಯುಗಟಿ-೧೭೭, ಸಿದ್ಧಪ್ಪಾರಾಧ್ಯ-೧೦೧, ಮೆನೆಜಿಸ್-ಅಂಗಡಿ-೧೭೭
ಒಟ್ಟು=೩

೧೭೮. ಅಂಕ ಕಳನೇರಿ : ಯುಗಟಿ-೧೭೮, ಸಿದ್ಧಪ್ಪಾರಾಧ್ಯ-೧೦೨, ಮೆನೆಜಿಸ್-ಅಂಗಡಿ-೧೭೮, ಮೂರುಶಿಳ್ಳಿ-೨೯ ಒಟ್ಟು=೩

೧೭೯. ಅಡಿಹರಯ್ಯಾ : ಯುಗಟಿ-೧೭೯, ಸಿದ್ಧಪ್ಪಾರಾಧ್ಯ-೧೦೩, ಮೆನೆಜಿಸ್-ಅಂಗಡಿ-೧೭೯, ಬಸರೂರು ಸುಬ್ಬರಾವ್-೫ ಒಟ್ಟು=೪

೧೮೦. ಹೊಲಬುಗೊಂಡ : ಯುಗಟಿ-೧೮೦, ಬಾಗಿ-೬೪, ಸಿದ್ಧಪ್ಪಾರಾಧ್ಯ-೧೦೪, ಮೆನೆಜಿಸ್-ಅಂಗಡಿ-೧೮೦, ವೆಲೆಬಿಲ್-೩೦ ಒಟ್ಟು=೫

೧೮೧. ನಾದಪ್ರಿಯ : ಹಳಕಟ್ಟಿ-೬೩, ಮಾಸ್ತಿ-೧೩೧, ಸಂಗನಾಳಮಠ-೧೩, ಯುಗಟಿ-೧೮೧, ಥಿಯೋಡೋರ್-ಹಕಾರಿ-೮, ಪಿ.ಶಾಮರಾವ್-೫, ಯಮುನಾಚಾರ-೭, ಮೆನೆಜಿಸ್-ಅಂಗಡಿ-೧೮೧, ಕೆ.ಈಶ್ವರನ್-೬೬, ಸಿ.ಎನ್.ಹಿರೇಮಠ-೪೯, ಪಿ.ಉಮಾಶಂಕರ-೬೮,ಅನಂತನಾರಾಯಣ-೫೬, ಶಿವಪ್ರಕಾಶ-ನಾಗಭೂಷಣ ೫೮, ವಿರುಪಾಕ್ಷಪ್ಪ-೭೦, ಡಿ.ಎ.ಶಂಕರ-೪೩, ದಿ.ಸೈನ್-೫೬,ಉಷಾಪಾಲಾಕ್ಷಪ್ಪ-೬೬
ಒಟ್ಟು=೧೭

೧೮೨. ಹಸಿವಾದಡುಂಬು : ಮಾಸ್ತಿ-೧೬, ಹಳಕಟ್ಟಿ-೧೧೨, ಯುಗಟಿ-೧೮೨, ಬಾಗಿ-೬೫, ಸಿದ್ಧಪ್ಪಾರಾಧ್ಯ-೧೦೫, ಮೆನೆಜಿಸ್-ಅಂಗಡಿ-೧೮೨, ಮೂರುಶಿಳ್ಳಿ-೩೧ ಒಟ್ಟು=೭

೧೮೩. ತನ್ನಾಶ್ರಯದ : ಮಾಸ್ತಿ-೧೫, ಸಂಗನಾಳಮಠ-೫೬, ಯುಗಟಿ-೧೮೩, ಬಾಗಿ-೬೬, ಥಿಯೋಡೋರ್-ಹಕಾರಿ-೭೧,ಮೆನೆಜಿಸ್-ಅಂಗಡಿ-೧೮೩, ಸಿ.ಎನ್.ಹಿರೇಮಠ೨೩, ಮಾತೆ ಮಹಾದೇವಿ-೨೬, ಡಿ.ಎ.ಶಂಕರ-೪೪, ದಿ.ಸೈನ್-೪೮, ಆರ್ಯ ಆಚಾರ್ಯ-೨೬ ಒಟ್ಟು=೧೧.

೧೮೪. ಬಂಡಿ ತುಂಬ : ಮಾಸ್ತಿ-೧೭, ಹಳಕಟ್ಟಿ-೬೮, ಯುಗಟಿ-೧೮೪, ಪಿ.ಶಾಮರಾವ್-೫೭, ಮೆನೆಜಿಸ್-ಅಂಗಡಿ-೧೮,ಕೆ.ಈಶ್ವರನ್-೧೪, ಬಸರೂರು ಸುಬ್ಬರಾವ್-೪
ಒಟ್ಟು=೭

೧೮೫. ಭಕ್ತನಾಗಿ ಲಿಂಗ : ಯುಗಟಿ-೧೮೫, ಸಿದ್ಧಪ್ಪಾರಾಧ್ಯ-೧೦೭,ಮೆನೆಜಿಸ್-ಅಂಗಡಿ-೧೮೫
ಒಟ್ಟು=೩

೧೮೬. ಭೂಮಿಂಯೊಳಗೆ : ಯುಗಟಿ-೧೮೬, ಸಿದ್ಧಪ್ಪಾರಾಧ್ಯ-೧೦೮, ಮೆನೆಜಿಸ್-ಅಂಗಡಿ,-೧೮೬, ಮೂರುಶಿಳ್ಳಿ-೩೨, ಒಟ್ಟು=೪

೧೮೭. ಕನ್ನಡಿಯ : ಯುಗಟಿ-೧೮೭, ಸಿದ್ಧಪ್ಪಾರಾಧ್ಯ-೧೧೯,ಮೆನೆಜಿಸ್-ಅಂಗಡಿ-೧೮೭, ವೆಲೆಬಿಲ್೩೭,
ಕೆ.ಈಶ್ವರನ್-೧೫, ಮೂರುಶಿಳ್ಳಿ-೩೦ ಒಟ್ಟು=೬

೧೮೮. ಗೀತವ ಹಾಡಿದ : ಯುಗಟಿ-೧೮೮, ಬಾಗಿ-೭೦, ಸಿದ್ಧಪ್ಪಾರಾಧ್ಯ-೧೧೦, ಮೆನೆಜಿಸ್-
ಅಂಗಡಿ-೧೮೮, ಆರ್ಯ ಆಚಾರ್ಯ-೨೭, ಒಟ್ಟು=೫

೧೮೯. ಲಿಂಗವ ಪೂಜಿಸಿದ : ಯುಗಟಿ-೧೮೯, ಸಿದ್ಧಪ್ಪಾರಾಧ್ಯ-೧೧೧, ಮೆನೆಜಿಸ್-ಅಂಗಡಿ೧೮೯,
ವೆಲೆಬಿಲ್-೩೨, ಡಿ.ಎ.ಶಂಕರ-೪೫, ಒಟ್ಟು=೫

೧೯೦. ಹಮ್ಮಿನ ಭಕ್ತಿ : ಹಳಕಟ್ಟಿ-೧೩೧, ಯುಗಟಿ-೧೯೦, ಸಿದ್ಧಪ್ಪಾರಾಧ್ಯ- ೧೧೨, ಮೆನೆಜಿಸ್-
ಅಂಗಡಿ-೧೯೦, ಒಟ್ಟು=೪

೧೯೧. ದ್ವೈತಾದ್ವೈತ : ಯುಗಟಿ- ೧೯೧, ಬಾಗಿ-೬೭, ಮೆನೆಜಿಸ್-ಅಂಗಡಿ-೧೯೧, ಒಟ್ಟು=೩

೧೯೨. ಲಾಂಛನ : ಯುಗಟಿ-೧೯೨, ಸಿದ್ಧಪ್ಪಾರಾಧ್ಯ-೧೧೩, ಮೆನೆಜಿಸ್-ಅಂಗಡಿ-೧೯೨, ಒಟ್ಟು=೩

೧೯೩. ಆಡುತ್ತ ಹಾಡುತ್ತ : ಯುಗಟಿ-೧೯೩, ಸಿದ್ಧಪ್ಪಾರಾಧ್ಯ-೧೧೪, ಮೆನೆಜಿಸ್-ಅಂಗಡಿ೧೯೩,
ದಿ.ಸೈನ್-೫. ಒಟ್ಟು=೪

೧೯೪. ಕಲ್ಲ ನಾಗರ : ಮಾಸ್ತಿ-೨೪, ಸಂಗನಾಳಮಠ-೧೬, ಬಸವನಾಳ-ಅಯ್ಯಂಗಾರ-೪೯,
ಯುಗಟಿ-೧೯೪, ಪಿ.ಶಾಮರಾವ್-೮೭, ಮೆನೆಜಿಸ್-ಅಂಗಡಿ-೧೯೪,
ಥಿಯೋಡೋರ್-ಹಕಾರಿ-೭೯ಸಿ.ಎನ್.ಹಿರೇಮಠ-೭೯, ಪಿ.ಉಮಾಶಂಕರ೭೧,
ವೆಲೆಬಿಲ್-೩೩,ಅನಂತನಾರಾಯಣ-೨೫, ಬೋಂದಾಡೆ-೧೭,ರೊಮೆನೆಹಿಲ್ಲ-
ಪ್ರಭುಶಂಕರ-೧೬, ಶಿವಪ್ರಕಾಶ-ನಾಗಭೂಷಣ-೪೩, ವಿರುಪಾಕ್ಷಪ್ಪ-೩೩,
ಡೋಣೂರ-೧೭, ಡಿ.ಎ.ಶಂಕರ-೪೬, ದಿ.ಸೈನ್-೩೦, ಉಷಾಪಾಲಾಕ್ಷಪ್ಪ-೧೫,
ಆರ್ಯ ಆಚಾರ್ಯ-೨೮, ಒಟ್ಟು=೨೧

೧೯೫. ನಾಗಂಗೆ : ಯುಗಟಿ-೧೯೫, ಸಿದ್ಧಪ್ಪಾರಾಧ್ಯ-೧೧೫, ಮೆನೆಜಿಸ್-ಅಂಗಡಿ-೧೯೫,
ಮೂರುಶಿಳ್ಳಿ,-೩೩ ಒಟ್ಟು=೪

೧೯೬. ಎರೆದಡೆ : ಯುಗಟಿ-೧೯೬, ಮೆನೆಜಿಸ್-ಅಂಗಡಿ-೧೯೬ ಒಟ್ಟು=೨

೧೯೭. ಅಗ್ನಿಯಾಧಾರ : ಯುಗಟಿ-೧೯೭, ಸಿದ್ಧಪ್ಪಾರಾಧ್ಯ-೧೧೬, ಮೆನೆಜಿಸ್-ಅಂಗಡಿ-೧೯೭
ಒಟ್ಟು=೩

೧೯೮. ಭಾಂಡವ : ಯುಗಟಿ-೧೯೮, ಸಿದ್ಧಪ್ಪಾರಾಧ್ಯ-೧೧೭, ಮೆನೆಜಿಸ್-ಅಂಗಡಿ-೧೯೮,
ಮೂರುಶಿಳ್ಳಿ-೩೪ ಒಟ್ಟು=೪

೧೯೯. ಮಾಡಿ ನೀಡಿ : ಯುಗಟಿ-೧೯೯, ಬಾಗಿ-೬೮, ಮೆನೆಜಿಸ್-ಅಂಗಡಿ-೧೯೯,
ಕೆ.ಈಶ್ವರನ್-೧೬, ಆರ್ಯ ಆಚಾರ್ಯ-೨೯ ಒಟ್ಟು=೫

೨೦೦. ಉಂಡುದು : ಯುಗಟಿ-೨೦೦, ಸಿದ್ಧಪ್ಪಾರಾಧ್ಯ-೧೧೮, ಮೆನೆಜಿಸ್-ಅಂಗಡಿ-೨೦೦
ಒಟ್ಟು=೩

೨೦೧. ಆಯುಷ್ಯ : ಯುಗಟಿ-೨೦೧, ಸಿದ್ಧಪ್ಪಾರಾಧ್ಯ-೧೧೯, ಮೆನೆಜಿಸ್-ಅಂಗಡಿ-೨೦೧
ಒಟ್ಟು=೩

೨೦೨. ತನು ಮನ : ಯುಗಟಿ-೨೦೨, ಬಾಗಿ-೬೯, ಸಿದ್ಧಪ್ಪಾರಾಧ್ಯ-೧೨೦, ಮೆನೆಜಿಸ್-ಅಂಗಡಿ೨೦೨
ಒಟ್ಟು=೪

೨೦೩. ತನು-ಮನ : ಸಿದ್ಧಪ್ಪಾರಾಧ್ಯ-೧೨೧, ಮೆನೆಜಿಸ್-ಅಂಗಡಿ-೨೦೩, ಮೂರುಶಿಳ್ಳಿ,-೩
ಒಟ್ಟು=೩

O Mridha, it lets me not spend
the days in remembrance of Thee.
O Lord Kudala Sangama,
be it Thy Gracious Will
that I cherish Thy feet.
I pray with outstretched lappet
of my garment.
May Thy will prevail.

Bagi (19)

Thou shouldst become mine, the driest twig
would break into tender fronds in my hand;
the beast of burden I have would become
the fleetest horse; and the bitterest poison
would turn into nectar,
For, every felicity has its home in Thee, Lord!

P.Samarao (117)

ಇದಲ್ಲದೆ ಸಕಲೇಶ ಮಾದರಸನ ವಚನದಲ್ಲಿ ಬರುವ "ಓದು ಒಕ್ಕಾಲು ಬುದ್ಧಿ ಮುಕ್ಕಾಲು" ಎಂಬ ಗಾದೆಯೊಂದನ್ನು "Reading one legged intellect three legged" ಎಂದು ಅನುವಾದಿಸಿದುದನ್ನೂ ಇಲ್ಲ ನೆನೆಯಬಹುದು. "ಗಿರಿಘನ ವಜ್ರ ಕಿರಿದೆನ್ನಬಹುದೇ? ಎಂಬಲ್ಲಿಯ ವಜ್ರ ಶಬ್ದಕ್ಕೆ ಸಿಡಿಲು ಅರ್ಥದ thunderbolt, ಎಂದು ಬಳಸಬಹುದೇ ವಿನಃ diamond ಅಲ್ಲ.

**ವಿಸ್ತಾರಾನುವಾದ** : ಒಂದು ಭಾಷೆಯ ಅಗತ್ಯ ಮತ್ತು ಅನಿವಾರ್ಯತೆಯನ್ನು ಗಮನಿಸಿ ಅನುವಾದವನ್ನು ವಿಸ್ತರಿಸಬೇಕಾಗುತ್ತದೆ. ಮೂಲಭಾವ ಅನುವಾದದಲ್ಲಿ ಸಮರ್ಪಕವಾಗಿ ತರಲು ಸಾಧ್ಯವಿಲ್ಲವೆನಿಸಿದರೆ ಅನುವಾದಕ ಒಂದು ಶಬ್ದವನ್ನೊ ವಾಕ್ಯವನ್ನೊ ಹೆಚ್ಚಿಗೆ ಸೇರಿಸಬಯಸುತ್ತಾನೆ. ಕೆಲವು ಸಂದರ್ಭಗಳಲ್ಲಿ ವಿಸ್ತಾರಾನುವಾದ ಉಪಯುಕ್ತವೆನಿಸಿದರೂ ಅದು ಮೂಲ ಪರಿಧಿಯನ್ನು ದಾಟಬಾರದು. "ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ ವಚನದ ಅನುವಾದವನ್ನು ಉದಾಹರಣೆಗಾಗಿ ಇಲ್ಲಿ ನೋಡಬಹುದು.

Pray to god to show you away from temptations.
So make you blind, so that you may not see evil, make
lame of boeh legs so that you may not roam about and
visit houses of ill repute, make you deaf so that you may

not hear slander, not speak misleading words or ill of god. To help you to withdraw all desires as a tortoise with draws its limbs to seek shelter under the root of its shell intimes of danger. But Oh! man let those limbs be released, those eyes regain their eyesight, those cars their power of hearing only to reach the Lord-Kudala Sangama to see his divine form, to hear his sweet and honeyed words and worship him.

P. Umashankar (7)

How strongly I wish to use my body, senses and mind in thy service. O, Master!I want my legs totake me to the places where I may meet thy saints and attendtheir holy congregations. I want my eyes to see this beautiful world as thy creation. I want my ears to hear the holy words of thy great souls. In matter of going to morally unhealthful places I be crippled. In matter of seeing and hearing the evil may I be blind and deaf, O, Lord. Bless ,O Father, may you make my mind ever think of thee, and make my heart ever adore the feet of thy saints!

Sri Siddheshwar Swamiji (44)

**ನಿಕಟಾನುವಾದ** : ವಸ್ತು ಮತ್ತು ಶೈಲಿಗಳನ್ನು ದೃಷ್ಠಿಯಲ್ಲಿರಿಸಿಕೊಂಡು ಮಾಡುವ ಅನುವಾದವಿದು. ಮೂಲಕ್ಕೆ ಏನನ್ನೂ ಸೇರಿಸದೆ ಯಾವ ಅಂಶವನ್ನೂ ಕೈಬಿಡದೆ ಎಲ್ಲ ದೃಷ್ಟಗಳಿಂದಲೂ ಮೂಲದ ಹಾದಿಯನ್ನು ಅನುಸರಿಸುವ ಅನುವಾದವೇ ನಿಕಟಾನುವಾದ. ಇದು ಶಬ್ದಾನುವಾದ ಮತ್ತು ವಿಸ್ತಾರಾನುವಾದಗಳಿಗಿಂತ ತುಂಬ ಭಿನ್ನವಾಗಿದ್ದು ಮೂಲವನ್ನು ಅನುಸರಿಸುತ್ತದೆ. ಇಲ್ಲಿ ಅನುವಾದಕ ಎಷ್ಟೇ ನಿಕಟವಾಗಿ ಮೂಲವನ್ನು ಅನುಸರಿಸಿದರೂ ಶಬ್ದಾರ್ಥಗಳನ್ನು ಮೀರಿ ನಿಲ್ಲುವ ಭಾವವನ್ನು ಸೆರೆ ಹಿಡಿಯಲು ಹೆಣಗಬೇಕಾಗುತ್ತದೆ. ಇಂಥಲ್ಲಿ ಅನುವಾದದ ಸೃಜನಾತ್ಮಕ ಪ್ರತಿಭೆ ಮುಖ್ಯವಾಗುತ್ತದೆ. ಉತ್ತಮ ಅನುವಾದಗಳೆಂದು ಗುರುತಿಸಲಾದ ವಚನಾನುವಾದಗಳು ಈ ವರ್ಗಕ್ಕೆ ಸೇರುತ್ತವೆ. ಉದಾ :

The rich raise temples,
but poor as I am-
this, I shall do-

my legs for pillars,
my body for sanctum,
my head, the golden *kalasa*
complete.
O hearken! Lord Kudala Sangama-
matter passes ,
but spirit adides.

Theodore –Hakari (34)

Dancing, my legs don’t tire,
looking, my eyes don’t tire,
singing, my tongue doesn’t tire-
what shall I do? What?
My hands keep worshipping You
and my mind doesn’t tire-
what shall I do? What?
*Kudala Sangama Deva,* listen,
I long to split open Your bellyand get inside.

Rowene Hill (79)

If you say;
What brings you ?
Are you well?
Will all your riches flee?
If you say ‘Sit down please’,
Will the earth give away?
If you speak straight away
Will your head and tummy fall apart ?
If you can’t be generous,Forget it,
If you don’t have this much goodness,
Will not Kudalasangama,the matter,cut off your nose

-H.S.Shivaprakash
O.L. Nagabhushanaswami (146)

**ಭಾವಾನುವಾದ** : ಇಂಗ್ಲೀಷಿನಲ್ಲಿ free translation ಅಥವಾ paraphrase ಎಂದು ಕರೆಯಲಾಗಿರುವುದನ್ನೇ ಕನ್ನಡದಲ್ಲಿ ಭಾವಾನುವಾದವೆಂದು ಹೆಸರಿಸಿದೆ. ಇದೊಂದು ರೀತಿಯ ಮುಕ್ತ ಅನುವಾದವಾಗಿದ್ದು. ಆದರೂ ಅದು ಬೇಕಾಬಿಟ್ಟಿ ಅನುವಾದವಾಗಬಾರದು. ಮೂಲದ ಭಾವ ಶಬ್ದಾರ್ಥಗಳಿಂದ ಗ್ರಹಿಸಲು ಸಾಧ್ಯವಾಗದಿದ್ದಾಗ ಅನುವಾದಕ ಭಾವಾನುವಾದದ ಮೊರೆ ಹೋಗಬೇಕಾಗಿರುತ್ತದೆ. ಈ ವಿಧಾನದಲ್ಲಿ ಮೂಲದ ಭಾವವನ್ನು ಅನುವಾದಕ ಅನುಸರಿಸಬೇಕಾಗುತ್ತದೆ. ಇಲ್ಲದಿದ್ದರೆ ಮೂಲಭಾವ ಬಿಟ್ಟು ಏನೇನೋ ಹೇಳಿದಂತಾಗುತ್ತದೆ. ಆಗ ಅನುವಾದ ಸಹಜ ಸೊಬಗನ್ನು ಕಳೆದುಕೊಳ್ಳುತ್ತದೆ. ಉದಾ :

The fire enkindled in the hearth
may be extinguished with the earth:
Should the earth itself be ablaze,
what charm can quench its rage away?
Should the very embankment drain off
the water in its confines,
Should ever the fence nibble away
the corn stalks within,
should the mother's own milk envenom
the suckling child,-
should thus the Preserver himself
Destroyer turn,
Where lies the anchor of my hope,
O Lord, Kudala Sangama!

Basawanal –Iyangar (9)

If a crow sees a grain food,does it not call for its
relatives? If a hen see a corn to peck does it call
its tribe? If one is a servant of God and does not work
for his other servants, he is truly smaller than that crow
and that hen.

Masti (51)

**ಸಂಗ್ರಹಾನುವಾದ** : ಈ ಅನುವಾದಲ್ಲಿ ಸಂಗ್ರಹಣ ಮುಖ್ಯವಾದುದು. ಇಂಥ ಅನುವಾದವನ್ನು ಇಂಗ್ಲೀಷಿನಲ್ಲಿ epitomy, précis, synopsis, summary, condensation, abridgement ಎಂದೆಲ್ಲ ಕರೆಯಲಾಗಿದೆ. ಕೆಲವು ಸಲ ಸುದೀರ್ಘವಾದ ವಿಷಯಗಳನ್ನು ಅನುವಾದಕ ಸಂಗ್ರಹಿಸಬೇಕಾಗುತ್ತದೆ. ಪುನರುಕ್ತಿ, ವರ್ಣನೆ

ಅನಗತ್ಯ ವಿಷಯಗಳನ್ನು ಸಂಗ್ರಹಾನುವಾದಕ ಕೈಬಿಡಬೇಕಾಗುತ್ತದೆ. ಒಟ್ಟು ಇಲ್ಲಿ ಔಚಿತ್ಯಪ್ರಜ್ಞೆ ಮುಖ್ಯವಾಗಿದ್ದು; ಸಂಗ್ರಹಾನುವಾದ ಮಹತ್ವಪೂರ್ಣ ವಿಧಾನವೆನಿಸುತ್ತದೆ. ಉದಾ :

Why get angry with one who frets at me?
Anger is bane to one's greatness ,
And disease to spiritual self.

Sanganalmath (57)

Why should one resent at another's anger?
Anger ill-becomes all greatness;
Resentment is harmful to wisdom;
The fire in the heart burns up one's own house
But not other's.

P.Shamarao (28)

Without love there is no religion,
Therefore show love towards all creation ;
Love is the base of religion,
Let love control your every action.

Venkat Reddi Desai (7)

You can stand near the hearth which has red hot cinders
but not on the scorching earth for it will make you jump.
You go to stream to drink the cool water but ahead of
you is the mud on the banks which
has drawn in all water. Your cow grazes on the green
pastures but the fence you have put makes a bold bid to
limit its space-by this you have made your cow yield
less milk. Your wife thought herself too
clever when she stealthily stole the milk meant for the
calf from the cows under and prepared butter from its
cream. You ate this with relish but you thought that it
was poison you had eaten for the milk was not

your legal share. The cow is dumb and cannot complain
Oh Lord.

P.Umashankar (99)

**ರೂಪಾಂತರ :** ಅನುವಾದದ ಈ ಪ್ರಕಾರವನ್ನು ಇಂಗ್ಲಿಷನಲ್ಲಿ adaptation ಎಂದು ಕರೆಯಲಾಗಿದೆ. ಮೂಲದ ಸತ್ವ, ಶೈಲಿಯನ್ನು ಅನುಕರಿಸುವ ರೂಪಾಂತರವೆಂಬುದು ಬಹುಮಟ್ಟಿಗೆ ಸ್ವತಂತ್ರ ಕೃತಿಯಾಗಿರುತ್ತದೆ. ಇಲ್ಲಿ ಅನುವಾದಕ ಮೂಲಕೃತಿಯನ್ನು ರೂಪಾಂತರಿಸುತ್ತಾನೆ. ಇಲ್ಲಿ ಅನುವಾದಕನಿಗೆ ಸಾಕಷ್ಟು ಸ್ವಾತಂತ್ರ್ಯವಿರುವದರಿಂದ ನಿಖರತೆ ಸಾಧ್ಯವಿಲ್ಲ. ಉದಾ :

Hark! Heaven and earth, each can other be
With truth on your lips you heaven enjoy;
With the false tongue you unloose hell,
Heaven's e'er reward for righteousness hell is requital
for evilness.
Thou the witness, the KNOWER ALL-
My Lord Kudala Sangama.

Theodore /Hakari (28)

**ಸರಳಾನುವಾದ:** ಸರಳಾನುವಾದ ಭಾಷೆಯಲ್ಲಿ ಮೂಲದ ವಸ್ತು, ರೀತಿ ಮತ್ತು ಶೈಲಿಯನ್ನು ಅನುವಾದಿಸುವುದು. ಇಂಗ್ಲಿಷಿನಲ್ಲಿ ಇದನ್ನು basic translation ಎಂದು ಕರೆಯಲಾಗಿದೆ. ಇಲ್ಲಿ ಸರಳತೆಯೇ ಪ್ರಧಾನವಾಗಿರುವುದರಿಂದ ಸಾಮಾನ್ಯ ಓದುಗನನ್ನು ಅನುವಾದಕ ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ. ಒಂದು ಭಾಷೆಯ ಶಿಷ್ಟಸಾಹಿತ್ಯವನ್ನು ಅದೇ ಭಾಷೆಯಲ್ಲಿ ಸರಳಾನುವಾದಗೊಳಿಸಿದ ಉದಾಹರಣೆಗಳಿವೆ (ಹಳಗನ್ನಡ ಮತ್ತು ವಚನಗಳ ಗದ್ಯಾನುವಾದಗಳನ್ನು ಗಮನಿಸಬಹುದು). ಹೀಗಾಗಿ ಇದನ್ನು ಒಂದೇ ಭಾಷೆಯಲ್ಲಿ ನಡೆಯುವ ಕ್ರಿಯೆ ಎನ್ನಬಹುದು. ಆದರೆ ಇದು ಅಷ್ಟಕ್ಕೆ ಸೀಮಿತವಾಗಿರಬೇಕೆಂದೇನೂ ಇಲ್ಲ. ಉದಾ :

There is no other difference between hell and heavenly
world. Speaking truth is the heavenly world,
and speaking falsehood itself isthe hell.
Living an honest and decent life is the heaven.
Living a wicked, dishonest life will be the hell.
The main Principle of life should be, living a virtuous
truthful life. For all this,
You are the judge Lord Kudalasangama Deva.

Usha Palakshappa (24)

**ಅರ್ಥಾನುವಾದ :** ಅನುವಾದದಲ್ಲಿ ಅರ್ಥಗ್ರಹಣವೂ ಮುಖ್ಯ. ಇಂಗ್ಲಿಷಿನಲ್ಲಿ ಈ ವಿಧಾನವನ್ನು sense translation, vertical translation ಎಂದೆಲ್ಲ ಕರೆಯಲಾಗಿದೆ. ನೇರವಾಗಿ ಅರ್ಥದತ್ತ ಇಲ್ಲಿ ಗಮನಹರಿಸಲಾಗುತ್ತದೆ. ಐ.ಎ.ರಿಚರ್ಡ್ಸ್ ಹೇಳುವಂತೆ ಯಾವುದೇ ಶಬ್ದಾರ್ಥ ನಾಲ್ಕು ಅಂಶಗಳನ್ನು ಆಧರಿಸುತ್ತದೆ. ಅವು ಅರ್ಥ, (ense) ಭಾವ,(feeling) ಕಾಕು ಅಥವಾ ಧ್ವನಿ(tone) ಮತ್ತು ಆಶಯ(intention). ಇಲ್ಲಿ ಅರ್ಥವೇ ಮುಖ್ಯವಾಗಿರುವುದನ್ನು ಈ ಅನುವಾದ ಸಮರ್ಥಿಸುತ್ತದೆ. ಕೆಲವೊಂದು ಸಂದರ್ಭಗಳಲ್ಲಿ ಮೂಲದ ಭಾವ, ಸೌಂದರ್ಯ, ಆಶಯಗಳನ್ನು ಯಥವತ್ತಾಗಿ ತರಲು ಸಾಧ್ಯವಾಗದೇ ಹೋದಾಗ ಅರ್ಥಾನುವಾದವನ್ನಾದರೂ ಒದಗಿಸಬೇಕಾಗುತ್ತದೆ. ಮೂಲಕ್ಕೆ ವಿಧೇಯವಾದ ಇಂಥ ಅನುವಾದ ಅರ್ಥಾನುವಾದವೆನ್ನಿಸಿಕೊಳ್ಳುತ್ತದೆ. ಹೀಗೆ ಅನುವಾದದ ತತ್ವ ವಿಧಾನಗಳು ಕಂಡು ಬರುತ್ತವೆ.

ಸರಳ ಭಾಷಿಕ ಅನುವಾದಕ್ಕಿಂತ ಸಾಂಸ್ಕೃತಿಕ ಅನುವಾದ (Cultural translation) ಅಥವಾ ರೂಪಾಂತರ ಹೆಚ್ಚು ಕ್ಲಿಷ್ಟವೂ ತೊಂದರೆದಾಯಕವೂ ಆಗಿರುತ್ತದೆ. ಇಂಥ ಸಮಯದಲ್ಲಿ ಅನುವಾದಕನು ಮೂಲಕೃತಿಯ ಸಾಹಿತ್ಯದರ್ಶನಕ್ಕೆ ಧಕ್ಕೆ ಬಾರದ ಹಾಗೆ ಕೆಲವು ಚಿಕ್ಕ ಪುಟ್ಟ ಮಾರ್ಪಾಡುಗಳನ್ನು ಅನಿವಾರ್ಯವಾಗಿ ಮಾಡಿಕೊಳ್ಳಬೇಕಾಗುತ್ತದೆ.

ಅನುವಾದ ಪ್ರಕ್ರಿಯೆಯಲ್ಲಿ ಮೂಲ ಕೃತಿಯನ್ನು ಇದ್ದಕ್ಕಿದ್ದ ಹಾಗೆಯೇ ಕೆಲವರು ಅನುವಾದ ಮಾಡಿದರೆ, ಇನ್ನು ಕೆಲವರು ಅದರ ಭಾವಾನುವಾದವನ್ನು ಸಮರ್ಪಕವಾಗಿ ಮಾಡಿದ್ದಾರೆ. ವಚನಗಳು ಹನ್ನೆರಡನೆಯ ಶತಮಾನದ ಮೌಖಿಕ ಪರಂಪರೆಗೆ ಸಂಬಂಧಿಸಿರುವುದರಿಂದ ಅವುಗಳ ಅನುವಾದ ಮಾಡುವ ಅನುವಾದಕ ಅದನ್ನು ಅಗತ್ಯವಾಗಿ ಗಮನಿಸಬೇಕಾಗುತ್ತದೆ. ಕೊನೆಗೆ ಒಂದು ಮಾತನ್ನು ಗಮನದಲ್ಲಿಟ್ಟಕೊಳ್ಳಬೇಕು. `All translation are provisional" ಎಲ್ಲ ಅನುವಾದಗಳು ತಾತ್ಪೂರ್ತಿಕ (ಅಪರಿಪೂರ್ಣ). `Ideal' ಅನುವಾದಕ್ಕಾಗಿ ನಾವು ಯಾವತ್ತೂ ಕಾಯುತ್ತಿರಬೇಕು. ಒಟ್ಟಿನಲ್ಲಿ ಆದರ್ಶ ಅನುವಾದದಲ್ಲಿ ಮೂಲ ಪಠ್ಯ ಮುಕ್ತಿಯನ್ನು ಪಡೆಯುತ್ತದೆ. Translation must be one with the original in the form inter-linear version in which titeralness and freedom are united the task of the translator"[೫]. ಎಂದು ಹೇಳುವುದರ ಉದ್ದೇಶವೂ ಇದೇ ಆಗಿದೆ.

**೨. ವಚನಗಳ ಅನುವಾದ**

ಒಂದೆಡೆ ಅನುವಾದ ಪ್ರಕ್ರಿಯೆಯ ಕುರಿತು ವಿದ್ವಾಂಸರೊಬ್ಬರು ಹೀಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.. At first glance, translation may seem to be a transparent and unproblematic category of human activity....Translation, at the level of simplest perception ,involves three sequentially interrelated entities.—an original text, its reproduction in another language and its final reproduction in the readers of what translation has transcreated. Though no seasoned translator can be so naïve,beginners tend to imagine that translation is purely linguistic transaction,that is, a simple matter of a linguistically denuded text being re-clothed in a language different from the

one in which it was swathed at its first birth"[೯] ಇದು ವಚನಗಳ ಅನುವಾದದ ಹಿನ್ನೆಲೆಯಲ್ಲಿ ಅನುಸರಿಸಬೇಕಾದ ಮಾರ್ಗದತ್ತ ನಮ್ಮ ಗಮನ ಸೆಳೆಯುತ್ತದೆ. ನೇರವಾಗಿ ಸೃಜನಶೀಲಸಾಹಿತ್ಯದ ಅನುವಾದಕ್ಕೂ ವಚನಗಳ ಅನುವಾದಕ್ಕೂ ಕೆಲವು ವ್ಯತ್ಯಾಸಗಳಿವೆ. ವಚನವನ್ನು ಸಾಹಿತ್ಯವೆಂದು ಕರೆದಾಗಲೂ ಕೂಡ ಅದು ಅನುಭಾವ ನೆಲೆಯ ಮುಖೇನ ಸಾಮಾಜಿಕ ಬದಲಾವಣೆಯ ಆಶಯವನ್ನು ಹೊಂದಿರುವುದು ಮುಖ್ಯವಾಗಿದೆ. ಜೊತೆಗೆ ಅದು ಮಧ್ಯಕಾಲೀನ ಕನ್ನಡ  ಭಾಷೆಯ ಲಕ್ಷಣಗಳನ್ನು ಹೊಂದಿದೆ. ಇದರ ಅರೋಣದಯಕ್ಕೆ ಮೊದಲು ರಾಜಪ್ರಭುತ್ವ ಕೇಂದ್ರಿತವಾದ ಪರಂಪರೆಯೊಂದು ನೆಲೆಯಾಗಿದ್ದಿತು.  ಕದಂಬರಿಂದ ಮೊದಲ್ಗೊಂಡು ಚಾಲುಕ್ಯರ ವರೆಗೆ ಆಳಿದ ಅರಸರು ,ಅವರು ನಡೆಸಿದ ಯುದ್ಧಗಳು, ಅವರು ತಂದ ಕಾನೂನುಗಳು ಮತ್ತು ಧಾರ್ಮಿಕವಾದ ಪ್ರದರ್ಶನ ಪ್ರಿಯತೆ, ಸ್ಪರ್ಧೆಗಳು, ಬಲಿ–ಆರಾಧನೆಗಳು, ಒಂದು ವಿಲಕ್ಷಣ ಸಂದರ್ಭವನ್ನು ಸೃಷ್ಟಿಸಿದ್ದವು.ಇವುಗಳಿಗೆ ಮುಖಾಮುಖಿಯಾಗಿ ಎದ್ದು ಬಂದ ವಚನಗಳನ್ನು ಅನುವಾದಿಸುವಲ್ಲಿ ಮುಖ್ಯವಾಗಿ ಎರಡು ಪ್ರಜ್ಞೆಗಳು ಅಗತ್ಯವಾಗಿ ಬೇಕು. ಒಂದು ನಡೆದು ಬಂದ ಭಾಷೆ, ಸಾಹಿತ್ಯ ಸಂಸ್ಕೃತಿಗಳ ತಿಳಿವಳಿಕೆ ಎರಡು ಶರಣರು ಎದುರಾಗಿ ಸ್ಥಾಪಿಸಿದ ಮೌಲ್ಯಗಳ ತಿಳಿವಳಿಕೆ, ಇವುಗಳ ಹಿನ್ನೆಲೆಯಲ್ಲಿ ಅನುವಾದಕರು ವಚನಗಳನ್ನು ಗ್ರಹಿಸಬೇಕಾಗುತ್ತದೆ.

ಹಾಗೆ ನೋಡಿದರೆ ಕನ್ನಡದಲ್ಲಿ ಈಚೆಗೆ ಹೋಮರ್ ಮಹಾಕವಿಯ ಮಹಾಕಾವ್ಯಗಳು ಒಂದೆಡೆಗೆ ಅನುವಾದಗೊಂಡಿದ್ದರೆ, ಟಾಲಸ್ಟಾಯ, ಗಾರ್ಕಿ, ದಸ್ತೋವಸ್ಕಿಯಂಥವರ ಬೃಹತ್ ಕಾದಂಬರಿಗಳು ಇನ್ನೊಂದೆಡೆಗೆ ಅನುವಾದಗೊಂಡಿವೆ. ಇವು ನೇರವಾಗಿ ಆಯಾ ಭಾಷೆಯಿಂದಲೇ ಕನ್ನಡಕ್ಕೆ ಬಂದವುಗಳಲ್ಲ. ಬಹುತೇಕ ಇಂಗ್ಲಿಷ್ ಮುಖೇನ ಕನ್ನಡಕ್ಕೆ ಬಂದಿವೆ. ಅದೇ ರೀತಿ ರಾಮಾಯಣ, ಮಹಾಭಾರತಗಳನ್ನು ಪಾಶ್ಚಾತ್ಯ ವಿದ್ವಾಂಸರು ಇಂಗ್ಲಿಷ್ ಮುಖೇನ ತಮ್ಮ ತಮ್ಮ ಭಾಷೆಗಳಿಗೆ ಬರಮಾಡಿಕೊಂಡಿದ್ದನ್ನು ಇಲ್ಲಿ ನೆನೆಪಿಸಬಹುದು. ಇವುಗಳಲ್ಲಿ ಒಂದು ಕಥನದ  ಎಳೆ ಇರುವುದರಿಂದ ಅಲ್ಲಿಯ ಅನುವಾದ ಬೇರೆ ಕೌಶಲ್ಯಗಳನ್ನು  ಅಪೇಕ್ಷಿಸುತ್ತದೆ. ಭಾಷಾ ಶಕ್ತಿ –ಸಾಮರ್ಥ್ಯಗಳನ್ನು ಹೊಂದಿದ ವಿದ್ವಾಂಸರು ಕೇವಲ ಅವುಗಳನ್ನು ಮಾತ್ರ ನಂಬಿಕೊಂಡು ಅನುವಾದ ಮಾಡುವಂತಿಲ್ಲ. .ವಚನಗಳು ಕಾಣ್ಕೆಯಲ್ಲಿ, ಆಶಯದಲ್ಲಿ, ತಮ್ಮ ಭಾಷಿಕ ಗಾತ್ರವನ್ನು ಮೀರಿ ನಿಲ್ಲುತ್ತವೆ ಮತ್ತು ಅವು ಸಮಕಾಲೀನ ಸಂವೇದನೆಗಳಲ್ಲಿ ರೂಪುಗೊಂಡಿರುತ್ತವೆ. ಭವಿಷ್ಯದ  ಕ್ಷೇಮ ಚಿಂತನೆಗಳಿಗಾಗಿ ಕಾತರಿಸುತ್ತವೆ. ಒಂದೊಂದು ವಚನಗಳಲ್ಲಿ ವಚನಕಾರರ ಅಂಕಿತ ಇದ್ದೇ ಇರುತ್ತದೆ. ಅವು ಗದ್ಯರೂಪದಲ್ಲಿ ಕಂಡು ಬಂದರೂ ಕಾವ್ಯದ ಲಯ ಮತ್ತು ಗತಿಯನ್ನು ಮೈಗೂಡಿಸಿಕೊಂಡಿವೆ. 'ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ....ಎನ್ನುವಾಗ ಲಯದ ಒಳಶ್ರೋತ ಚೆನ್ನಾಗಿ ಹೆಜ್ಜೆ ಹಾಕುತ್ತದೆ. 'ಲೋಕದ ಡೊಂಕ ನೀವೇಕೆ ತಿದ್ದುವಿರಿ ? ಎಂಬಲ್ಲಿ ವ್ಯಂಗ್ಯ ವಿಷಾದ, ಆಪ್ತಹಿತ ಬೋಧನೆ, ಸುಧಾರಣಾ ಭಾವ ಕಂಡು ಬಂದರೂ ಯಾವುದು ಮುಖ್ಯ ಯಾವುದು ಅಮುಖ್ಯ ಎಂಬುದನ್ನು ಅನುವಾದಕ ನಿರ್ಣಯಿಸಬೇಕಾಗುತ್ತದೆ. ಬಸವಣ್ಣನವರ ವಚನಗಳು ಇತರ ವಚನಕಾರರಿಗೆ ಹೋಲಿಸಿದರೆ  ಮೇಲ್ನೋಟದಲ್ಲಿ ಅನುವಾದಕ್ಕೆ ಸುಲಭ ಎಂದು ತೋರಬಹುದು.  ಆದರೆ ಇಲ್ಲಿ ಒಂದಿಷ್ಟು ಸೂಕ್ಷ್ಮವನ್ನು  ಅರ್ಥಮಾಡಿಕೊಳ್ಳಬೇಕಾದ ಅಗತ್ಯವಿದೆ. ಚಾರಿತ್ರಿಕ ಮತ್ತು ಸಾಮುದಾಯಿಕ ಸೃಷ್ಟಿಯಾದ ಭಾಷೆಯನ್ನು ಬಸವಣ್ಣನವರು ತಮ್ಮ ವಚನಗಳಿಗೆ

ಬಳಸಿಕೊಂಡಿದ್ದಾರೆ. ಆದರೆ ಆಶಯ ಮತ್ತು ಧೋರಣೆಗಳಲ್ಲಿ ಸಾಮುದಾಯಿಕತೆಗೆ ಭಿನ್ನವಾಗಿ ನಿಂತು ಬದಲಾವಣೆಗೆ ಕರೆ ನೀಡುತ್ತಾರೆ. ಇಲ್ಲಿ ಬಸವಣ್ಣನವರ ಜನಪ್ರಿಯ ವಚನವೊಂದನ್ನು ಕಾಣಬಹುದು.

ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ.

ವಚನದ ಮೊದಲ ಭಾಗ ಜನಸಮುದಾಯದ ದಿನನಿತ್ಯದ ಮಾತುಕತೆಗಳಲ್ಲಿ ಕಂಡುಬರುವ ಸಂಗತಿಯೇ ಆಗಿದೆ. ಅದು ಸಾಮಾನ್ಯರ ಬದುಕಿನ ಅನುಭವ ಪ್ರಪಂಚಕ್ಕೆ ಸೇರಿದ ಸಂಗತಿ. ವಚನದ ಎರಡನೆಯ ಭಾಗದಲ್ಲಿ ಬಸವಣ್ಣನವರು 'ಭಕ್ತಿಪಕ್ಷ' ವನ್ನು ಪ್ರತಿಷ್ಠಾಪಿಸಲು ಯತ್ನಿಸುತ್ತಾರೆ. ಆದರೆ ಅವರು ಅದನ್ನು ಜನಾಂಗದ ಪೂರ್ವದ ಸ್ಮರಣೆಗಳ ಮುಖೇನ ಮಾಡಲು ಹೊರಟಿರುವುದರಿಂದ ಭಾಷಿಕವಾಗಿ ಜನರೊಂದಿಗೆ ನಿಂತರೂ ಕೂಡ ಆಶಯದಿಂದ ಪ್ರತ್ಯೇಕವಾಗಿ ನಿಲ್ಲುತ್ತಾರೆ. ಈ ಪ್ರತ್ಯೇಕತೆಗೆ ಮತ್ತು ಅವರು ನಿಂತಿರುವ ಸ್ತರಕ್ಕೆ ಜನಸಮುದಾಯವನ್ನು ಕರೆತರಲು ಅವರು ಬಯಸಿದ್ದಾರೆ. ಹೀಗಾಗಿ ಜನಪದ ನಂಬಿಕೆ, ಗಾದೆ, ಮಿಥ್, ಭಾಷೆ ಇವುಗಳ ನಡುವೆ ಹುಟ್ಟಿಕೊಳ್ಳುವ ಆಶಯ ಹೊಸತಿನೆಡೆಗೆ ನಮ್ಮನ್ನು ಸೆಳೆಯುತ್ತದೆ. ಅನುವಾದವು ಈ ಸೂಕ್ಷ್ಮಗಳನ್ನು ಗ್ರಹಿಸುವ ಶಕ್ತಿ ಮತ್ತು ಸಾಮರ್ಥ್ಯಗಳನ್ನು ತೋರಬೇಕಾಗುತ್ತದೆ. ಇದನ್ನು ಗಮನಿಸಿಯೇ ಜೆ.ಪಿ. ಶೌಟನ್ A vacana is not characterized by strong rules of metre. But it has Nevertheless, its own rhythm because of a deliberate choice of words, in which repetition parallelism,and wordplay are striking. Many vacanakaras make use of obvious similies from everyday life; although some authors sometimes employ a rather difficult allegorical figurative language as well. There are a number of long Vacanas; but most of these poems are rather short and pithy. The poet tries,in a fewsentences,to evoke a certain tension which leads to a statement about devotion or liberation at the end"[೧೦]. ಎಂದು ಹೇಳಿರುವುದು ಒಂದರ್ಥದಲ್ಲಿ ವಚನ ಸಾಹಿತ್ಯದ ಲಕ್ಷಣಗಳನ್ನು ಗುರುತಿಸಿದಂತಿದೆ. ವಚನಗಳ ಅನುವಾದ ಕಾರ್ಯ ತುಂಬ ಜಟಿಲವಾದುದುದಕ್ಕೆ ಡಾ : ಕಲಬುರ್ಗಿಯವರು ಎರಡು ಕಾರಣಗಳನ್ನು ಕೊಟ್ಟಿದ್ದಾರೆ. ಒಂದು ಅಲ್ಲಿ ಒಂದಿಷ್ಟು ಅಶುದ್ಧ ಪಾಠ ಉಳಿದುಕೊಂಡುದು. ಇನ್ನೊಂದು ಅವು ಅನುಭವಿಕ ಅಭಿವ್ಯಕ್ತಿಗಳಾಗಿರುವುದು (ಮಾಣಿಕ್ಯ ದೀಪ್ತಿ, ಪು.xxix). ಇಲ್ಲಿ ಅನುವಾದಕ ತುಂಬ ಎಚ್ಚರಿಕೆಯಿಂದ ವಚನ ಪಾಠವನ್ನು ಗಮನಿಸಬೇಕಾಗುತ್ತದೆ. ಜೊತೆಗೆ ಸರಿಯಾದ ಅರ್ಥ, ಸಿದ್ಧಾಂತ, ಲೌಕಿಕ ಮತ್ತು ಧಾರ್ಮಿಕ ಆಚರಣೆ, ಪುರಾಣ, ಕಥೆ, ದೇಶಿ ಶಬ್ದಾರ್ಥ, ಸರಿಯಾದ ಅನ್ವಯ, ವಚನಕಾರನ ಆಶಯಗಳತ್ತ ಗಮನ ಕೊಡಬೇಕಾಗುತ್ತದೆ. ಇಲ್ಲಿ ಸ್ವಲ್ಪ ತಪ್ಪಿದರೆ ಇಡೀ ಅರ್ಥ ಹಾಳಾಗುವುದನ್ನು ಡಾ. ಕಲಬುರ್ಗಿಯವರು ಹೀಗೆ ಗುರುತಿಸಿ ಹೇಳಿದ್ದಾರೆ. ಹರಿವ ಹಾವಿಗಂಜೆ = ಚಲಿಸುವ ಹಾವಿಗೂ ಅಂಜಲಾರೆನು –ಎಂದು ಇದಕ್ಕೆ ಅರ್ಥವಲ್ಲ. ಕಚ್ಚುವ ಹಾವಿಗೂ ಅಂಜಲಾರೆನು ಎಂದು ಇದರ ಅರ್ಥ. ಹಳ್ಳಿಯಲ್ಲಿ 'ಕೈಗೆ

ಹಾವು ಹರಿಯಲಿ' (ಕಚ್ಚಲಿ) ಎಂಬ ಬೈಗುಳ ಬಳಕೆಯಲ್ಲಿದೆ. "ಬಡ ಹಾರುವನೇಸು ಭಕ್ತನಾದರೂ ನೇಣಿನ ಹಂಗ ಬಿಡ" ಇದನ್ನು ಬಡವನಾದ (poor) ಬ್ರಾಹ್ಮಣನು ಎಂದು ಅನುವಾದಿಸದೆ, ಬಡಪಾಯಿಯಾದ (miserable/ pitiable)ಬ್ರಾಹ್ಮಣನು ಎಂದು ಅನುವಾದಿಸಬೇಕು.

ಭಾರತೀಯರದು ಮೂಲತಃ ಸಮಾಜ ಘಟಕವನ್ನು ಉಪೇಕ್ಷಿಸಿ ವ್ಯಕ್ತಿ ಘಟಕವನ್ನು ಮಾತ್ರ ಗಮನಿಸಿದ ತತ್ವಜ್ಞಾನವಾಗಿದೆ. ಶರಣರು ಮಾತ್ರ ಈ ಎರಡನ್ನು ಕುರಿತು ಚಿಂತಿಸಿದರು. ಹೀಗಾಗಿ ಇದು ಕೇವಲ ವ್ಯಕ್ತಿ ಕಲ್ಯಾಣ ಸಿದ್ಧಾಂತವಲ್ಲ, ಸಮಾಜ ಕಲ್ಯಾಣ ಸಿದ್ಧಾಂತವಾಗಿಯೂ ವಿಸ್ತರಿಸಿಕೊಂಡಿತು. ಆದುದರಿಂದ ಡಾ : ಕಲುಬುರ್ಗಿಯವರು ಹೇಳುವಂತೆ ಇದನ್ನು "ಸಮಾಜೋಧಾರ್ಮಿಕ ಸಿದ್ಧಾಂತ" ಅಥವಾ "ಸಮಗ್ರ ಜೀವನ ಸಿದ್ಧಾಂತ"ವೆಂದು ಕರೆಯಬಹುದಾಗಿದೆ. ಈ ಸಿದ್ಧಾಂತ ಕೇವಲ ಆತ್ಮ-ಪರಮಾತ್ಮ ಚಿಂತನೆಗೆ ಸೀಮಿತವಾಗದೆ, ವ್ಯಕ್ತಿ ಸಮಾಜಗಳ ಚಿಂತೆನೆಯನ್ನು ಇದು ಅಳಡಿಸಿಕೊಂಡಿತು. ಡಾ : ಕಲಬುರ್ಗಿಯವರು ವನಚಗಳನ್ನು, ಬೈಬಲ್, ಕುರಾನ್‌ಗಳಂತೆ ಸಿದ್ಧಾಂತಸಾಹಿತ್ಯ ಇಲ್ಲವೆ ಶಾಸ್ತ್ರಸಾಹಿತ್ಯವೆಂದು ಕರೆಯಬಹುದೆಂದಿದ್ದಾರೆ. ಬಹುದಿನಗಳ ಹಿಂದೆಯೇ ಡಾ : ಫ.ಗು.ಹಳಕಟ್ಟಿ, ಎಂ.ಆರ್. ಶ್ರೀ ಮತ್ತು ರಂಗನಾಥ ದಿವಾಕರ ಅವರು ವಚನಶಾಸ್ತ್ರ, ವಚನಶಾಸ್ತ್ರಸಾರ, ವಚನಶಾಸ್ತ್ರರಹಸ್ಯ ಎಂದು ಕರೆದಿರುವದನ್ನು ಇಲ್ಲಿ ಜ್ಞಾಪಿಸಬಹುದು. ಆದುದರಿಂದ ಅನುವಾದಕನಿಗೆ ಈ ಸಿದ್ಧಾಂತದ ತಿಳಿವಳಿಕೆ ಅವಶ್ಯ ಬೇಕಾಗುತ್ತದೆ.

**೩. ಅನುವಾದದ ತಾತ್ವಿಕತೆ ಮತ್ತು ದೃಷ್ಟಿಕೋನ**

ಸೃಜನಶೀಲತೆ ಲೇಖಕನ ಶಕ್ತಿ ಸಾಮರ್ಥ್ಯಗಳಿಗೆ ಒರೆಗಲ್ಲಾಗಿರುವಂತೆ, ಪ್ರತಿ ಅನುವಾದವೂ ಅನುವಾದಕನಿಗೆ ಒಂದು ಸವಾಲಾಗಿರುತ್ತದೆ. ಎರಡು ಭಾಷೆ ಮತ್ತು ಸಂಸ್ಕೃತಿಗಳ ನಡುವಿನ ಸಂವಾದ ಮತ್ತು ಮುಖಾಮುಖಿಯಲ್ಲಿ ಅನುವಾದದ ತಾತ್ವಿಕತೆಗಳು ಏರ್ಪಡುತ್ತವೆ. ಅನುವಾದಕನಿಗೆ ಬುದ್ಧಿವಂತಿಕೆಯೊಂದಿಗೆ ಹೃದಯವಂತಿಕೆ ಮತ್ತು ನಿರ್ಧಾರದೊಂದಿಗೆ ನಿಪುಣತೆ ಅಗತ್ಯಬೇಕು. ವಚನಗಳು ವಿಶಿಷ್ಟ ರಚನೆಗಳಾದ ಪ್ರಯುಕ್ತ ವಚನಕಾರರ ದೃಷ್ಟಿಕೋನವನ್ನು ಹೊಂದಬೇಕಾಗುತ್ತದೆ. ಕಳೆದ ನೂರು ವರ್ಷಗಳ ವರೆಗಿನ ಬಸವಣ್ಣನವರ ವಚನಗಳ ಅನುವಾದದಲ್ಲಿ ನಡೆದಿರುವ ಪ್ರಯೋಗಗಳನ್ನು ಈ ಹಿನ್ನೆಲೆಯಲ್ಲಿ ನೋಡಬಹುದಾಗಿದೆ. ಆರಂಭ ಕಾಲದ ಅನುವಾದಕರಿಗೆ ಬಸವಣ್ಣನವರ ಸಾಮಾಜಿಕ ಸುಧಾರಣೆಯ ವಚನಗಳು ಮುಖ್ಯವೆನಿಸಿವೆ. ಹೆಚ್ಚು ತಾತ್ವಿಕ ಮತ್ತು ಪಾರಿಭಾಷಿಕ ಪದಗಳಿಲ್ಲದ ಅರ್ಥಗೂಢವಲ್ಲದ ವಚನಗಳನ್ನು ಅವರು ಉದ್ದೇಶಪೂರ್ವಕವಾಗಿ ಎತ್ತಿಕೊಂಡಿದ್ದಾರೆ. ಆಯ್ದ ವಚನಗಳನ್ನು ಕೂಡ ಅತ್ಯಂತ ನಿಖರವಾಗಿ ಇಂಗ್ಲಿಷ್ ಭಾಷೆಗೆ ತರ್ಜುಮೆ ಮಾಡುವಲ್ಲಿ ತುಂಬ ತೊಂದರೆಗಳನ್ನು ಅವರು ಎದುರಿಸಿದ್ದಾರೆ.

ಹಳಕಟ್ಟಿ, ಮಾಸ್ತಿ, ಸಂಗನಾಳಮಠ, ಬಸವನಾಳ -ಅಯ್ಯಂಗಾರ, ಬಾಗಿ, ಯಗಟಿ ಯವರಿಗೆ ವಚನವನ್ನು ಅನುವಾದಿಸಿ ಹೊರ ಜಗತ್ತಿಗೆ ತೋರಿಸಬೇಕೆನ್ನುವ ತುಡಿತವಿತ್ತು. ಅವರೆದುರು ಯಾವುದೇ ಸಿದ್ಧ ಮಾದರಿಗಳಿರಲಿಲ್ಲ. ತಮ್ಮ ಧರ್ಮ ಸಮಾಜದಲ್ಲಿ ಆಳವಾಗಿ ಬೇರೂರಬೇಕಾದರೆ ಅತ್ಯಂತ ಕೆಳಮಟ್ಟದ ಸಮಾಜದಲ್ಲಿ ಅದು ನೆಲೆಗೊಳ್ಳಬೇಕೆಂದು ವಚನಕಾರರು ಅರಿತಿದ್ದರು. ಹಾಗೆ ಅತ್ಯಂತಸಾಮಾನ್ಯರ ಮನಸ್ಸಿನಲ್ಲಿ ತಮ್ಮ ಅಭಿಪ್ರಾಯಗಳು ಮೂಡಬೇಕಾದರೆ ತಾವು ಬಳಸುವ ಭಾಷೆಯು ಸಾಮಾನ್ಯರ ಭಾಷೆಯಾಗಬೇಕಿತ್ತು; ಪಂಡಿತರು ಬಳಸುವ ಸಂಸ್ಕೃತ ಭೂಯಿಷ್ಠವಾದ ಭಾಷೆಯಲ್ಲಿಯೋ, ಆ ಕಾಲದ ಕವಿಗಳು ತಮ್ಮ ಕಾವ್ಯಗಳಲ್ಲಿ

ಬಳಸುತ್ತಿದ್ದ ಆಡುನುಡಿಗಿಂತ ಭಿನ್ನವಾದ ಕಾವ್ಯಭಾಷೆ [poetic diction]ಯಲ್ಲಿಯೋ ತಮ್ಮ ಅನಿಸಿಕೆಗಳನ್ನು ಹೇಳಿಕೊಂಡರೆ ಅದು ಮೇಲುವರ್ಗದ ಕೆಲವರನ್ನು ಮಾತ್ರ ತಲುಪುವುದೆಂದು ಬಲ್ಲ ಶರಣರು, ತಾವು ಸಾಮಾನ್ಯರ ಜೊತೆ ನಿತ್ಯ ವ್ಯವ್ಹಾರದಲ್ಲಿ ಬಳಸುತ್ತಿದ್ದ ಭಾಷೆಯಲ್ಲಿಯೇ ತಮ್ಮ ಆಳವಾದ ಅನುಭವಗಳನ್ನು ಹೇಳಿದರು.

ವಚನಕಾರರು ತಮ್ಮ ವಚನಗಳಲ್ಲಿ ತಮ್ಮ ಭಾವನೆಯ ತುರ್ತನ್ನು ಸೂಚಿಸುವ ಒಂದು ತಂತ್ರವಾಗಿ ಯಾರಿಗೋ ತಮ್ಮ ಭಾವನೆಯನ್ನು ಹೇಳಿಕೊಳ್ಳುವಂತೆ ರಚಿಸುತ್ತಾರೆ. ಅಂಕಿತಗಳನ್ನು ಬಳಸುವುದರಿಂದ ವಚನಕಾರರಿಗೆ ಈ ರೀತಿಯ ಸಹಾಯವೂ ದೊರೆಯಿತು. ತಮ್ಮ ಭಾವನೆಗಳನ್ನು ತಮ್ಮ ಅಂಕಿತಸ್ವರೂಪದ ಆರಾಧ್ಯ ದೈವಕ್ಕೆ ಹೇಳಿಕೊಳ್ಳುವಾಗ ಒಂದು ಆತ್ಮೀಯ ಶೈಲಿಯು ಮೂಡಿ ವಚನವು ಮನಮುಟ್ಟುತ್ತದೆ.

ಮೆನೆಜಿಸ್ ಮತ್ತು ಇತರರು ಮಾಡಿದ ಹಲವು ಅನುವಾದಗಳಲ್ಲಿ ಓದುಗನಿಗೆ ಬೋಧೆಯಾಗುವುದು ವಚನಗಳ ಧಾರ್ಮಿಕ, ಅನುಭಾವಿಕ ಮುಖ. ಅನುವಾದ ಯೋಜನೆಯ ಉದ್ದೇಶಗಳಲ್ಲಿ ದಾರ್ಮಿಕ ಅಂಶಗಳ ಪ್ರಾಧಾನ್ಯವನ್ನು ಇದು ಸೂಚಿಸುತ್ತದೆ. ಈ ಮುಖವನ್ನೇ ಪ್ರಧಾನವಾಗಿಸದೆ, ಹೆಚ್ಚು ಸಾರ್ವತ್ರಿಕವಾದ ಸಾಹಿತ್ಯಾತ್ಮಕ ಮುಖವನ್ನು ಗಮನಿಸಿ ಮಾಡಿರುವ ಅನುವಾದ ರಾಮಾನುಜನ್ ಅವರದು.

ಏನನ್ನಾದರೂ, ಹೇಗಾದರೂ ಮಾಡಿದರೆ ಅನುವಾದ ಎನಿಸುತ್ತದೆ ಎಂಬ ಮನೋಭಾವದ ಅನುವಾದಗಳು ಮೂಲಕೃತಿಗೆ ಹೇಗೋ ಹಾಗೆಯೇ ಅನುವಾದ ಮತ್ತು ಅನುವಾದಕರಿಗೂ ಅಪಚಾರವೆಸಗುವಂಥವು. ವಚನಗಳ ಇಂಗ್ಲೀಷ ಅನುವಾದಗಳ ಓದುಗವರ್ಗ ಇಂಗ್ಲೀಷ ಬಲ್ಲ ಕನ್ನಡಿಗರಲ್ಲದ ಕನ್ನಡ ತಿಳಿಯದ ಭಾರತೀಯರು ಮತ್ತು ಇತರರು. ಅಖಿಲ ಭಾರತೀಯ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕನ್ನಡದ ಅನುವಾದಗಳು ಭಾಷಾ ಪ್ರಭುತ್ವ, ಶಾಸ್ತ್ರೀಯ ನಿರ್ದಿಷ್ಟತೆ, ಭಾವಸ್ಪರ್ಶ ಹಾಗೂ ಕಾವ್ಯಾತ್ಮಕತೆಯ ಜೀವಾಳವನ್ನು ಒಳಗೊಳ್ಳುವ ಮೂಲಕ ಓದುಗನ ಮನ್ನಣೆಯನ್ನು ಗಳಿಸದಿದ್ದರೆ, ಅಂಥ ಅನುವಾದಗಳು ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನು ಕನ್ನಡೇತರರಿಗೆ ಸಮರ್ಥವಾಗಿ ಸಂವಹನಗೊಳ್ಳುತ್ತವೆಯೇ? ಎಂಬ ಪ್ರಶ್ನೆಯನ್ನು ವಚನಗಳ ಅನುವಾದಕರು ಮಾತ್ರವಲ್ಲ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳ ಅನುವಾದಕರೂ ಗಂಭೀರವಾಗಿ ಪರಿಗಣಿಸುವುದು ಅಗತ್ಯವಾಗಿದೆ.

ಈ ಸಂದರ್ಭದಲ್ಲಿ ವಿನಯ ಧಾರವಾಡಕರರು ಎ.ಕೆ. ರಾಮಾನುಜನ್‌ರ ಭಾಷಾಂತರ ಶೈಲಿಯ ಬಗ್ಗೆ ವಾದಿಸಿರುವ ಅಂಶಗಳು ನೆನಪಿಗೆ ಬರುತ್ತವೆ. ತೇಜಶ್ವಿನಿ ನಿರಂಜನರು ತಮ್ಮ ಸೈಟಿಂಗ ಟ್ರಾನ್ಸಲೇಶನ್ [೧೯೯೪] ಕೃತಿಯಲ್ಲಿ ರಾಮಾನುಜನ್‌ರ ಭಾಷಾಂತರ ಪದ್ಧತಿಯನ್ನು ಟೀಕೆ ಮಾಡಿದುದರ ಪ್ರತಿಯಾಗಿ ಧಾರವಾಡಕರರು ರಾಮಾನುಜನರನ್ನು ಸಮರ್ಥಿಸಿಕೊಳ್ಳುತ್ತಾರೆ. ರಾಮಾನುಜನರ ವೀರಶೈವ ಸಾಹಿತ್ಯವನ್ನು ಕ್ರಿಶ್ಚಿಯನ್ ಪ್ರೊಟೆಂಟ್ ಧರ್ಮದ ಪರಧಿಯೊಳಗೆ ಅರ್ಥೈಸುವದರಿಂದ ಅದರ ವಿಶಾಲತೆ ಮತ್ತು ಅರ್ಥ ಸೂಕ್ಷ್ಮತೆಗಳನ್ನು ಸಂಕುಚಿತಗೊಳಿಸಿದ್ದಾರೆಂದು ತೇಜಸ್ವಿನಿಯವರು ತಮ್ಮ ಕೃತಿಯಲ್ಲಿ ಆಪಾದಿಸಿದ್ದಾರೆ. ಇದಕ್ಕೆ ಪ್ರತಿಯಾಗಿ ಧಾರವಾಡಕ ಅವರು ರಾಮಾನುಜನ್‌ರು ಭಾಷಾಂತರವು ವೀರಶೈವ ಸಾಹಿತ್ಯವನ್ನು ಸಂಕುಚಿತಗೊಳಿಸುವ ಬದಲಾಗಿ, ಅದು ಕ್ರಿಶ್ಚಿಯನ ಪ್ರೊಟೆಸ್ಟೆಂಟ್ ಧರ್ಮದ ಜೊತೆಗೆ ಎಷ್ಟರ ಮಟ್ಟಿಗೆ ಹೋಲಿಕೆಗಳನ್ನು ಹೊಂದಿದೆ ಎಂದು ತೋರಿಸುತ್ತಾ, ಐರೋಪ್ಯ ಓದುಗರಿಗೆ ವೀರಶೈವ ಸಾಹಿತ್ಯವನ್ನು

ಪರಿಚಯಿಸುವ ಮತ್ತು ಅವರನ್ನು ಅದರೆಡೆಗೆ ಕರೆದುಕೊಂಡು ಹೋಗುವ ಪ್ರಯತ್ನವನ್ನು ಮಾಡಿದ್ದಾರೆಂದು, ಅದರ ಅರ್ಥ. ಸಿ.ಪಿ.ಬ್ರೌನ್‌ನ ವಿಷಯದಲ್ಲೂ ಧಾರವಾಡಕರ ಸಮರ್ಥನೆಗೆ ಸಹಮತ ವ್ಯಕ್ತಪಡಿಸಬಹುದು. ತನ್ನ ಅನುವಾದದ ಮೂಲಕ ಬ್ರೌನನು ಲೀಲೆ ಮತ್ತು ಪುರಾತನ ಯುರೋಪ ಸಾಹಿತ್ಯಗಳ ನಡುವಿನ ಅಸಂಖ್ಯಾತ ಹೋಲಿಕೆಗಳು ಮತ್ತು ಸಾಮ್ಯತೆಗಳನ್ನು ತೋರಿಸುತ್ತಾ ಲೀಲೆಯಲ್ಲಿ ಕಾಣಸಿಗುವ ಅನೇಕ ಶಬ್ದ, ಪದ ಮತ್ತು ಅರ್ಥಗಳನ್ನು ಇಂಗ್ಲೀಷ್‌ಗೆ ಪರಿಚಯಿಸುತ್ತಾನೆ. ಇವುಗಳ ಜೊತೆಗೆ ಅರ್ಥ ವಿವರಗಳನ್ನು ಸಹ ಕೊಟ್ಟಿದ್ದಾನೆ. ಪ್ರಾಯಶಃ ಜಂಗಮರನ್ನು ಪ್ರೊಟೆಂಟ್ ಕ್ರಿಶ್ಚಿಯನಿಟಿಗೆ ಹೋಲಿಸಿದ ಪ್ರಥಮ ವಿದ್ವಾಂಸ ಬ್ರೌನ್. ಉಳ್ಳವರು ಶಿವಾಲಯ....ವಚನದ ಸಾಲುಗಳಲ್ಲಿ ಮೊದಲಿನ ಆರು ಸಾಲುಗಳು ಕೊನೆಯ ಸಾಲಿನ ಸಂದೇಶಕ್ಕೆ ಪುಷ್ಟಿ ಕೊಡುತ್ತವೆ. ಕೊನೆಯ ಸಾಲು ಉಳಿದ ಸಾಲಿಗಿಂತ ರಚನೆ ಮತ್ತು ಲಯದಲ್ಲಿ ಭಿನ್ನವಾಗಿರುತ್ತದೆ. ಅಂಕಿತವು ಕೊನೆಯ ಸಾಲಿನ ಲಯ ಮತ್ತು ವಾಕ್ಯರಚನೆಯನ್ನು ಬದಲಿಸಲು ಮತ್ತು ಆ ಸಾಲನ್ನು ದೀರ್ಘಗೊಳಿಸಲು ನೆರವಾಗುತ್ತದೆ. ಈ ರೀತಿ ದಾಸರ ಹಾಡುಗಳಲ್ಲಿ ಮುಖ್ಯಸಂದೇಶ ಕೊನೆಗೆ ಬರಲಾರದು; ಶರಣರ ವಚನಗಳಲ್ಲಿ ಅದು ಮೊದಲಿಗೆ ಬರಲಾರದು. ಅವುಗಳ ಅನುಭವವನ್ನು ಗ್ರಹಿಸುವ ಸ್ವರೂಪ, ಪ್ರಕ್ರಿಯೆಗಳೇ ಅದಕ್ಕೆ ಕಾರಣವಾಗಿವೆ. ಬಸವಣ್ಣನವರ ವಚನಗಳಲ್ಲಿ ಹೆಚ್ಚಿನ ಆತ್ಮೀಯತೆ ಕಾಣುತ್ತದೆ. ಇದನ್ನು ಅನುವಾದದಲ್ಲಿ ತರಲು ಹೆಚ್ಚು ಜನ ವಿದ್ವಾಂಸರು ಸೋತಿದ್ದಾರೆ. ವಿಲಿಯಂ ಶೇಕ್ಸಪಿಯರನ ಸುನೀತಗಳಂತೆ ಮೊದಲಿನ-೧೨ ಸಾಲುಗಳ ಗರ್ಭಿತ ಅರ್ಥವನ್ನು ಕೊನೆಯ ಎರಡು ಸಾಲುಗಳಲ್ಲಿ ಕೊಡುವಂತೆ ವಚನಗಳೂ ಕೆಲವೊಮ್ಮೆ ಓದುಗನಿಗೆ ಆ ಮುದ ಕೊಡುತ್ತವೆ. ಇಂಗ್ಲಿಷ್‌ನಲ್ಲಿ ಅಂಥವುಗಳನ್ನು ಅನುವಾದಿಸದೇ ಬಿಟ್ಟ ಉದಾಹರಣೆಗಳು ಸಿಗುತ್ತವೆ.

Those that have built temples to the Lord ;
But being poor what can I do?
My legs shall bethe pillars and my body the temple ; my
head the golden spire thereof
The 'Sara'shall be the throne,
O Lord!
Thus Thou shalt be duly installed in me alone.

-P.Shamarao (79)

ಅನುವಾದದ ಉದ್ದೇಶಕ್ಕೂ ಅನುವಾದದ ವಿಧಾನಕ್ಕೂ ಸಂಬಂಧವಿರುತ್ತದೆ. ಮೆನೆಜಿಸ್-ಅಂಗಡಿಯವರು ವಚನಗಳನ್ನು ಅನುವಾದ ಮಾಡುವಾಗ ಕೃತಿನಿಷ್ಠವಾದ ಅನುವಾದ ಮಾಡುವ ಉದ್ದೇಶವಿತ್ತು. ಬಸವನಾಳ ಅಯ್ಯಂಗಾರವರಿಗೆ ವಚನಗಳ ಮೂಲ ಗದ್ಯವನ್ನು ಮುರಿದು ಪದ್ಯ ರೂಪದಲ್ಲಿ ಮೊದಲಬಾರಿಗೆ ಕಣ್ಣಿಗೆ ಕಾಣುವ ರೀತಿಯಲ್ಲಿ ಅಡಕಲೇರಿಸಿದಂತೆ ಅನುವಾದಿಸಿರುವದು ಒಂದು ವಿಶೇಷವಾದರೆ, ಮುಂದಿನ ಎಲ್ಲಾ ಅನುವಾದಕಾರರು ಅವರನ್ನು ಅನುಕರಿಸುತ್ತಾರೆ. *form*ನ ದೃಷ್ಟಿಯಿಂದ ಬಸವನಾಳರ ನಂತರ *The*

*sign*ನಲ್ಲಿ ಒಂದು ಹೊಸ ಪ್ರಯೋಗ. ಇದರಲ್ಲಿ ಇಂಗ್ಲಿಷನ *lyric* ಮಾದರಿಯನ್ನಾಗಿ ಇಟ್ಟುಕೊಂಡಿದ್ದಾರೆ. ಸಂಪಾದಕರಾದ ಓ.ಎಲ್.ನಾಗಭೂಷಣ ಸ್ವಾಮಿಯವರು ತಮ್ಮ ಯೋಜನೆಯ ಬಗ್ಗೆ ಹೀಗೆ ಹೇಳುತ್ತಾರೆ. "While translating we have taken each vachana as a single unit, equivalant of a sentence. As punctuation marks were not in vogue in 12th century texts, we have also done away with them in our translation. Vachana manuscripts present vachanas in run-on text format without breaking them into different lines, and it was only with S.S.Basavanala`s edition of Basavanna`s vahanas that the practice of printing vachanas like a poem with line breaks based on internal rhythmic structure, and punctuation marks came into practice. Also, the present translation makes use of capitalization of firs letter at the beginning of the sentence, for first person pronoun, for propernouns and signature words, following present day conventions of written English. The traslators have made line breaks keeping in mind the rhythmic pattern and meaning of the vachana in English. As we have considered each vachana as a sentence, we have done away with the convention of capitalizing the first letter of each line, except the beginning one. To that extent, we have exercised the freedom of translation"[೧೦]. ಹೀಗೆ ವಚನ ಕಾಲದಿಂದ ಕಾಲಕ್ಕೆ ಆವಶ್ಯಕತೆಗನುಗುಣವಾಗಿ ಅನುವಾದಗೊಳ್ಳುತ್ತಲೇ ಬಂದಿದೆ. ವಚನಗಳ ವ್ಯಾಪಕ ಅರ್ಥವನ್ನು ಹೊಸ ಹೊಸ ದೃಷ್ಟಿಕೋನಗಳಿಂದ ಪ್ರತಿ ಶಬ್ದಕ್ಕೂ ಇರುವ ಮಹತ್ವವನ್ನು ಅನುವಾದ ಪ್ರಕ್ರಿಯೆ ಹೊರತಂದಾಗ ಮಾತ್ರ ಸಾರ್ಥಕವೆನಿಸುತ್ತದೆ.

**ಗ್ರಂಥಋಣ**


೧. ಕಲಬುರ್ಗಿ ಎಂ.ಎಂ., 'ವಚನ' ಮಾಣಿಕ್ಯ ದೀಪ್ತಿ, ಅಪ್ರಕಟಿತ ಕೃತಿ ಪುಟ.xxiv

೨. ಪ್ರಧಾನ ಗುರುದತ್ತ, 'ಭಾಷಾಂತರ ಕಲೆ', ಬೆಂಗಳೂರು ಸಪ್ನ ಬುಕ್ ಹೌಸ, ೨೦೦೭;ಪುಟ.೨೮

೩. ಅದೇ ಪುಟ.೨೯

೪. Postgate J.P. `*Translations and Translations* London', 1922; p.27

೫. ಉದ್ಧೃತ : ಪ್ರಧಾನ ಗುರುದತ್ತ, 'ಭಾಷಾಂತರ ಕಲೆ', ಪುಟ.೭

೬. ರಾಮನುಜನ್ ಎ.ಕೆ. `*Speaking of Siva,* London', 1973; p.xiii

೭. Yaravinatelimath, *Caste Eradication Vachanas of Basaveshwara* p.೭.

೮. Walter Benjamin, London, p.82

೯. Raghavendra rao K. `*New Perpectives in Indian Literature'* in English, 1995; p.18

೧೦. Schoutan, `*Revolution of the Mystics*' Kampen : Kok Pharos, 1991; p.11

೧೧. Nagabushana swamy O.L., `*The Sign*' Introduction, p.17

❑❑❑

ಕನ್ನಡಕ್ಕೆ ವಿಶ್ವಮಾನ್ಯತೆ ತಂದುಕೊಟ್ಟಿರುವ ವಚನಸಾಹಿತ್ಯಕ್ಕೆ ಮಾರು ಹೋದ ವಿದ್ವಾಂಸರು ಅವುಗಳನ್ನು ಇನ್ನುಳಿದ ಇಂಗ್ಲಿಷ ಬಲ್ಲ ಕನ್ನಡೇತರರಿಗೆ ತಿಳಿಸುವ ಮಹದುದ್ದೇಶದಿಂದ, ಈ ಅಮೂಲ್ಯವಾದ ಸಂಪತ್ತನ್ನು ಇಂಗ್ಲಿಷ ಭಾಷೆಗೆ ಅನುವಾದಿಸಿದರು. ಆದರೆ ಅವು ವಿಶ್ವಸಾಹಿತ್ಯಿಕ ವಲಯದಲ್ಲಿ (ಮಾರುಕಟ್ಟೆಯಲ್ಲಿ) ಒಪ್ಪಿಕೊಳ್ಳಬಹುದಾದ, ಅನುವಾದಗಳಾಗಿ ಮೂಡಿ ಬಂದಿವೆಯೇ? ಎಂಬುದು ಬಹು ಮುಖ್ಯಪ್ರಶ್ನೆ. ಇಲ್ಲಿ ಒಬ್ಬ ಅನುವಾದಕನ ಎಲ್ಲ ವಚನಗಳ ಅನುವಾದಗಳು ಉತ್ಕೃಷ್ಟ ವಾಗಿಯೇ ಆಗಬೇಕೆಂದೇನಿಲ್ಲ. ಅವನ ಸಂಸ್ಕಾರ, ಲಿಂಗಾಯತ ಆಚಾರ-ವಿಚಾರಗಳ ಬಗೆಗೆ ಇರಬೇಕಾದ ಆಳವಾದ ಅಧ್ಯಯನ ಮತ್ತು ಎರಡೂ ಭಾಷೆಗಳನ್ನು ದುಡಿಸಿಕೊಳ್ಳುವ ಸಾಮರ್ಥ್ಯದ ಜೊತೆ ಜೊತೆಗೆ, ಅನುವಾದಕನ ಮನೋಭೂಮಿಕೆಯೂ ಅಷ್ಟೇ ಪರಿಣಾಮವನ್ನು ಬೀರುತ್ತದೆ. ಒಂದು ವಚನದ ಭಾವವನ್ನು ಪರಿಣಾಮಕಾರಿಯಾಗಿ ವ್ಯಕ್ತಪಡಿಸುವಲ್ಲಿ ಯಶ ಸಾಧಿಸಿದ ಅನುವಾದಕ ಇನ್ನೊಂದು ವಚನದಲ್ಲೂ ಅಷ್ಟೇ ಪರಿಣಾಮಕಾರಿಯಾಗಿ ಒಡಮೂಡಿಸುತ್ತಾನೆಂದು ಹೇಳಲಿಕ್ಕೆ ಬರುವುದಿಲ್ಲ.

ಇದರರ್ಥ ಅವನ ಒಂದೇ ಒಂದು ವಚನವನ್ನು ಲಕ್ಷದಲ್ಲಿಟ್ಟುಕೊಂಡು ಮೌಲ್ಯ ಮಾಪನ ಮಾಡುವಂತಿಲ್ಲ. ಅವರು ಅನುವಾದಿಸಿದ ಎಲ್ಲ ವಚನಗಳ ಹಿನ್ನೆಲೆಯಲ್ಲಿ ಒಂದು ನಿರ್ಧಾರಕ್ಕೆ ಬರಬೇಕಾಗುತ್ತದೆ. ಕೆಲವು ಸಲ ವಚನಗಳಲ್ಲಿ ಬಳಸಲಾದ ಶಬ್ದಗಳ ಸರಿಯಾದ ಅರ್ಥವಾಗದಿರುವದರಿಂದ,ಅವುಗಳಿಗೆ ಪ್ರತಿಯಾಗಿ ಸಂದರ್ಭೋಚಿತವೆನಿಸಿದ ಬೇರೆ ಶಬ್ದಗಳನ್ನು ಉಪಯೋಗಿಸಿದ, ಇಲ್ಲವೆ ಅರ್ಥಪೂರಕವೆಂದು ಹೆಚ್ಚಿಗೆ ಶಬ್ದವನ್ನು ಜೋಡಿಸಿದ, ಅಥವಾ ಅಂಥವುಗಳನ್ನು ಸಂಪೂರ್ಣವಾಗಿ ಕೈಬಿಟ್ಟ ಉದಾಹರಣೆಗಳು ಬೇಕಾದಷ್ಟು ಸಿಕ್ಕುತ್ತವೆ. ವಚನಸಾಹಿತ್ಯ ಅನುಭಾವ ಪರಂಪರೆಗೆ ಸೇರಿದುದರಿಂದ ಅದನ್ನು ಯಥಾವತ್ತಾಗಿ ಅನುವಾದಿಸುವುದು ತುಂಬ ಕಷ್ಟದ ಕೆಲಸ. ಒಂದು ಭಾಷೆಯಲ್ಲಿನ ಪ್ರಕ್ರಿಯೆಗಳನ್ನೂ, ಪರಿಭಾಷೆಯನ್ನೂ ರೂಢಿ ಸಂಪ್ರದಾಯಗಳನ್ನೂ, ಮತ್ತೊಂದು ಭಾಷೆಯಲ್ಲಿ ಪಡಿಮೂಡಿಸುವುದು ಮಹಾ ಸಾಹಸದ ಕಾರ್ಯವೇ ಸರಿ. ವಿದ್ವತ್ತು, ಪ್ರತಿಭೆ, ಮೇಳೈಸಿರುವ ವಿದ್ವಾಂಸರು ಕೈಕೊಳ್ಳುವಂಥದು.

ಒಂದು ವಚನಕ್ಕೆ ಕಾಲಕ್ರಮದಲ್ಲಿ ಹಲವು ವ್ಯಾಖ್ಯಾನಗಳಿದ್ದು ಅನುವಾದಕ ಯಾವ ವ್ಯಾಖ್ಯಾನವನ್ನು ಸ್ವೀಕರಿಸಿದ್ದಾನೆ, ಅಥವಾ ಸ್ವಂತ ವ್ಯಾಖ್ಯಾನ ನೀಡಿದ್ದಾನೆ ಅನ್ನುವುದು ಮುಖ್ಯವಾಗುತ್ತದೆ. ಬಸವಣ್ಣನವರ ಟೀಕಿನ ವಚನಗಳು: ಕಲಬುರ್ಗಿ ಸಂಪಾದಿತ, ಪ್ರತಿ ವಚನಕ್ಕೂ ಐದು ಭಿನ್ನ ವ್ಯಾಖ್ಯಾನಗಳಿವೆ, ಅಲ್ಲಮನ ಅನುವಾದವೂ 'ಒಂದು' ವ್ಯಾಖ್ಯಾನ: ಪ್ರತಿಯೊಂದು ಅನುವಾದವೂ ವಚನದ ಅರ್ಥ ಮತ್ತು ಮಹತ್ವವನ್ನು ಕುರಿತ ಒಂದೊಂದು ಬೇರೆ ಬೇರೆ ವ್ಯಾಖ್ಯಾನಗಳೇ ಆಗಿರುತ್ತವೆ. ಅನುವಾದದ ಮೌಲ್ಯಮಾಪನ ಅನ್ನುವುದು ಅರ್ಥ ವ್ಯಾಖ್ಯಾನ ಸಾಧ್ಯತೆಯ ಮೌಲ್ಯಮಾಪನ ಮಾತ್ರ ಆಗಲು ಸಾಧ್ಯ. ಅಂದರೆ ಅನುವಾದ ಸರಿಯೋ ತಪ್ಪೋ ಅನ್ನುವುದಲ್ಲ, ಅದು ನೀಡುವ ವ್ಯಾಖ್ಯಾನ ಅಂಗೀಕಾರಕ್ಕೆ ಅರ್ಹವೋ ಅಲ್ಲವೋ ಅನ್ನುವುದನ್ನು ಮಾತ್ರ ಹೇಳಬಹುದು.

ಯಾವ ಅನುವಾದವೂ ಸಮರ್ಪಕ, ಸಮಗ್ರ ಅಲ್ಲ. ಅನುವಾದ ಏನಿದ್ದರೂ ಪ್ರಕ್ರಿಯೆ. ಅರವತ್ತು ಪ್ರತಿಶತ ಸಾಧ್ಯವಾದರೆ ಅದು ಅತ್ಯುತ್ತಮ/ಅತಿಶ್ರೇಷ್ಠ ಅನುವಾದ ರಾಮಾನುಜನ ರವರ Faithfulness to the original means faithfulness not only at the level of words, the content, and the period, but also at the level of the author and the genesis of the meaning (sense) he is transmitting. To understand the sense of a text, therefore, the translator must grasp the intent of the author ಈ ಹೇಳಿಕೆ ಇಲ್ಲಿ ಸ್ಮರಣೀಯ.

ವಚನಾನುವಾದಗಳ ಮೌಲ್ಯಮಾಪನದಲ್ಲಿ ಸರ್ವಾನುಮತದ ಮಾನದಂಡಗಳು ಇಲ್ಲ. ಮೂಲಕ್ಕೆ ನಿಷ್ಠೆ ಅನ್ನುವುದು ಇದೆಯೇ? ಒಂದು ವಚನವನ್ನು ಯಾವ ಓದುಗ ಹೇಗೆ ಅರ್ಥಮಾಡಿಕೊಂಡಿರುತ್ತಾನೆಯೋ ಅದೇ ಮೂಲ ಅನ್ನುವ ಅಭಿಪ್ರಾಯ ಆತನಲ್ಲಿರುತ್ತದೆ. ಹಾಗಾಗಿ ಮೂಲಕ್ಕೆ ಹೋಲಿಸಿ ನೋಡುವುದು ಕೇವಲ ವೈಯಕ್ತಿಕ ಅಭಿರುಚಿ, ಮತ್ತು ತಿಳಿವಳಿಕೆಯ ಪ್ರಶ್ನೆಯಾಗಿಬಿಡಬಹುದು. ಸುಪ್ತವಾಗಿರುವ ಅರ್ಥವನ್ನು ವ್ಯಕ್ತಗೊಳಿಸಿದ್ದರೆ ಆಗ ಅದು, 'ಮೂಲ'ಕ್ಕಿಂತ ದೂರ ಹೋಗಿದ್ದರೂ ಒಳೆಯ ಅನುವಾದವೇ. ವಚನದ ಟೋನ್/ ಧೋರಣೆಯನ್ನು ಸಮರ್ಥವಾಗಿ ಪ್ರತಿಬಿಂಬಿಸಿದ್ದರೆ ಅದು ಒಳ್ಳೆಯ ಅನುವಾದ. ಹಳಕಟ್ಟಿಯವರಿಗಾಗಲೀ ಇಲ್ಲವೇ ಮೊದಲು ಅನುವಾದ ಕಾರ್ಯ ಕೈಗೆತ್ತಿಕೊಂಡವರಿಗಾಗಲಿ ಸಿದ್ಧಮಾದರಿ ಎಂಬುದು ಇರಲಿಲ್ಲವಾದುದರಿಂದ ಅಲ್ಲಿ ಹೆಚ್ಚು ಸ್ವಂತಿಕೆ ಕಾಣಬರುತ್ತದೆ. ನಂತರ ಬಂದ ಅನುವಾದಕರು ತಮ್ಮ ಸ್ವಂತಿಕೆಯೊಂದಿಗೆ ಕೆಲವೊಮ್ಮೆ ಸಿದ್ಧ ಮಾದರಿಯಿಂದ ಪ್ರಭಾವಿತರಾದದ್ದನ್ನು ಕಾಣುತ್ತೇವೆ. ತಾವು ಅನುವಾದಿಸಿದ್ದುದು ಸರಿಯೋ ಇಲ್ಲವೇ ಮೊದಲಿನವರು ಅನುವಾದಿಸಿದ್ದು ಸರಿಯೋ ಎಂಬ ಗೊಂದಲ, ಗಲಿಬಿಲಿ ಅವರಲ್ಲಿ ಆದದ್ದು ಸುಳ್ಳೇನಲ್ಲ. ಕೆಲವರಂತೂ ಮೂಲ ವಚನಗಳ ಆಶಯದಿಂದ ಬಹು ದೂರ ಸರಿದಿದ್ದಾರೆ.

ನಮ್ಮ ಪ್ರಸ್ತುತ ಅಧ್ಯಯನಕ್ಕಾಗಿ ಮೂವತ್ತು (೩೦) ಜನಪ್ರಿಯ ವಚನಗಳನ್ನು ಆಯ್ದುಕೊಳ್ಳಲಾಗಿದೆ. ಅವುಗಳ ಅನುವಾದ, ವಿನ್ಯಾಸ, ಸಮರ್ಪಕತೆ, ನಿಷ್ಠತೆ. ಭಾಷಾ ಪ್ರೌಢಿಮೆ,ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮೌಲ್ಯಮಾಪನ ಮಾಡಲಾಗಿದೆ. ಕರ್ನಾಟಕ ಸರಕಾರ ಪ್ರಕಟಿಸಿದ ಸಮಗ್ರ ವಚನ

ಸಂಪುಟದ ಸಂಪುಟ-೧೫ ಪ್ರಥಮ ಅವೃತ್ತಿಯನ್ನು ಆಧಾರವಾಗಿ ಇಟ್ಟು ಕೊಳ್ಳಲಾಗಿದೆ.ಅವುಗಳನ್ನು ಅಕಾರಾದಿಯಾಗಿ ಬಳಸಿಕೊಳ್ಳಲಾಗಿದೆ.

೧. ಅಂದಣವನೇರಿದ ಸೊಣಗನಂತೆ
ಕಂಡರೆ ಬಿಡದು ತನ್ನ ಮುನ್ನಿನ ಸ್ವಭಾವವನು.
ಸುಡು, ಸುಡು, ಮನವಿದು ವಿಷಯಕ್ಕೆ ಹರಿವುದು,
ಮೃಡ, ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ, ಕೂಡಲಸಂಗಮದೇವಾ,
ನಿಮ್ಮ ಚರಣವ ನೆನೆವಂತೆ ಕರುಣಿಸು,
ಸೆರಗೊಡ್ಡಿ ಬೇಡುವೆ, ನಿಮ್ಮ ಧರ್ಮ.

ವಚನ ಸಂಖ್ಯೆ.-೩೪

ಈ ವಚನವನ್ನು ೧೨ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಮನಸ್ಸು ಮತ್ತು ಅದರ ನಿಯಂತ್ರಣವನ್ನು ಕುರಿತು ಬಸವಣ್ಣನವರು ಇದರಲ್ಲಿ ಸರಳವಾಗಿ ಹೇಳಿದ್ದಾರೆ. ಮನಸ್ಸು ಅಂದಣ ಏರಿದ ನಾಯಿಯ ಹಾಗೆ ಸದಾ ವಿಷಯಗಳ ಕಡೆಗೆ ಹರಿಯುತ್ತದೆ. ಅದು ದೇವನ ಸ್ಮರಣೆಯನ್ನು ಮಾಡಲು ಕೂಡ ಬಿಡುವದಿಲ್ಲ. ನಿಜವಾದ ಭಕ್ತ ತನ್ನ ಮನಸ್ಸು ದೇವರಲ್ಲಿ ನೆಲೆ ನಿಲ್ಲಲಿ ಎಂದು ಪರಮಾತ್ಮನನ್ನೇ ಅನನ್ಯವಾಗಿ ಬೇಡಿಕೊಳ್ಳುತ್ತಾನೆ. ಮನಸ್ಸಿನ ಸೊಣಗತನವನ್ನು ಕಳೆದು ಕೊಳ್ಳುವುದೇ ನಿಜವಾದ ಭಕ್ತನ ಲಕ್ಷಣ. ಈ ವಚನವನ್ನು ಅನುವಾದಿಸುವಲ್ಲಿ ಮಾಸ್ತಿಯವರು ಪ್ರಯೋಗಿಸಿದ If it sees its old desires it reverts ಎನ್ನುವ ಪದಗುಚ್ಛ ಇಲ್ಲಿ ಪ್ರಸ್ತುತವೆನಿಸುವುದಿಲ್ಲ. it must run ಎನ್ನುವುದರ ಅವಶ್ಯಕತೆ ಅಷ್ಟಾಗಿ ಕಾಣುವುದಿಲ್ಲ. ಬಸವನಾಳ-ಅಯ್ಯಂಗಾರ ಅವರ ಅನುವಾದದಲ್ಲಿ At sight of a mouse or refuse ಎಂದು ವಚನದಲ್ಲಿ ಇಲ್ಲದ ಇಲಿಯನ್ನು ಸೃಷ್ಟಿಸುತ್ತಾರೆ. ಬಾಗಿಯವರು ಅನುವಾದದ ಕೊನೆಯಲ್ಲಿ ವಚನದ ಆಶಯಕ್ಕೆ ಸಮೀಪ ಬಂದರೂ dog ಎಂದರೆ ಸಾಕಾಗುವ ಸ್ಥಳದಲ್ಲಿ cur ಎಂದು abusive term ಬಳಸುತ್ತಾರೆ. Burn it! Turn it to ashes! ಎನ್ನುವುದು ಸುಡು, ಸುಡು, ಎನ್ನುವುದರ ಶಬ್ದಶಃ ಅನುವಾದವಾದರೂ ತಪ್ಪು ಎನಿಸುತ್ತದೆ. ಹಕಾರಿ-ಥಿಯೋಡರ್ ಅವರು ವಚನದ ಮೂಲ ಆಶಯವನ್ನೇ ಮರೆ ಮಾಚುವಂತಿದೆ. ಮೆನೆಜಿಸ್-ಅಂಗಡಿಯವರು ಇದ್ದುದರಲ್ಲಿ ವಚನದ ಮೂಲಕ್ಕೆ ಸ್ವಲ್ಪ ಸಮೀಪ ಬರುತ್ತಾರೆ. ಸಿ.ಎನ್. ಹಿರೇಮಠ ಅವರ ಅನುವಾದವು ಮೊದಲಿಗೆ ಅಂದವಾಗಿ ಕಂಡರೂ ಕೊನೆಯಲ್ಲಿ ಮುಗ್ಗರಿಸುತ್ತದೆ. ನಿಮ್ಮ ಧರ್ಮ ಎನ್ನುವುದು thy religion ಎಂದು ಶಬ್ದಶಃ ಅನುವಾದ ಮಾಡಿರುವುದು grace ಆಗಬೇಕಾಗಿತ್ತು. ಶ್ರೀ ಸಿದ್ಧೇಶ್ವರ ಸ್ವಾಮಿಗಳ ಅನುವಾದ ಒಂದು ಸುದೀರ್ಘ ಟಿಪ್ಪಣಿಯಾಗಿಯಾಗಿರುತ್ತದೆ. ಬಿ.ವಿರುಪಾಕ್ಷಪ್ಪ ಮನವಿದು ವಿಷಯಕ್ಕೆ ಹರಿವುದು ಎನ್ನುವುದನ್ನು sensory pleasures ಅನ್ನುವುದರ ಬದಲಾಗಿ sensual pleasures ಎಂದಾಗ ಬೇಕಿತ್ತು. Shivaprakash/Nagabhushan ಅವರು ಕೊನೆಯ ಪದಪುಂಜವನ್ನು it is your duty, ಎಂದೂ ಡಿ.ಎ.ಶಂಕರ ಕಂಡರೆ ಎನ್ನುವ ಪದವನ್ನು spies ಎಂದೂ ಸುಡು ಸುಡು ಎನ್ನುವ ಶಾಪದ

ಪದವನ್ನು burn it, burn it ಶಬ್ದಶಃ ಅನುವಾದಕ್ಕಿಂತ fie, ಅನ್ನುವ ಪದ ಹೆಚ್ಚು ಸೂಕ್ತವೆನಿಸುತ್ತಿತ್ತು. ಒಟ್ಟಿನಲ್ಲಿ ಇದ್ದುದರಲ್ಲಿಯೇ ಯಗಟಿಯವರ ಅನುವಾದ ಮೂಲ ವಚನದ ಆಶಯಕ್ಕೆ ಸಮೀಪ ಬರುತ್ತದೆ.

My mind is like a dog seated
in a palanquin. It cannot shirk off
its born nature, for its jumps down
When attracted by the objects of senses,
fie upon this mind which meditates not
On Thee, bless me as to remember
Thy feet, I impose, my Lord, Kudala Sangama!

Yagati(34)

೨. ಅತ್ತಲಿತ್ತ ಹೋಗದಂತೆ, ಹೆಳವನಮಾಡಯ್ಯಾ ತಂದೆ,
ಸುತ್ತಿ ಸುಳಿದು ನೋಡದಂತೆ, ಅಂಧಕನ ಮಾಡಯ್ಯಾ ತಂದೆ,
ಮತ್ತೊಂದ ಕೇಳದಂತೆ, ಕಿವುಡನ ಮಾಡಯ್ಯಾ ತಂದೆ,
ನಿಮ್ಮ ಶರಣರ ಪಾದವಲ್ಲದೆ
ಅನ್ಯ ವಿಷಯಕ್ಕೆಸಳದಂತೆ ಇರಿಸು,ಕೂಡಲಸಂಗಮದೇವಾ

ವಚನ ಸಂಖ್ಯೆ-೫೯

ಈ ವಚನವನ್ನು ೨೨ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಪ್ರಸ್ತುತ ವಚನದಲ್ಲಿ ಬಸವಣ್ಣನವರು ಇಂದ್ರಿಯಗಳಿಂದ ಮನುಷ್ಯ ಅಧೋಗತಿಗೂ ಹೋಗಬಲ್ಲ, ಉದ್ಧಾರದ ಮಾರ್ಗವನ್ನೂ ಕಾಣಬಲ್ಲ ಎಂದು ಸ್ಫುಟವಾಗಿ ಹೇಳಿದ್ದಾರೆ.ಅತ್ತಲಿತ್ತ ಹೋಗುವುದೆಂದರೆ ಮಾಯಾ ಪ್ರಪಂಚವನ್ನು ಹೊದ್ದುವ ರೀತಿಯಾಗಿದೆ.ಅದಕ್ಕಿಂತಲೂ ಹೆಳವನಾಗಿ ಅದರಿಂದ ದೂರ ಇರುವುದು ಶರಣರನ್ನು ಕಾಣುವುದಕ್ಕಾಗಿ, ಕಿವಿಗಳಿರುವುದು ಲಿಂಗ ನುಡಿಗಳನ್ನು ಕೇಳಲಿಕ್ಕಾಗಿ ಎಂಬ ಭಾವ ಇಲ್ಲಿದೆ. ಇಂಥಹ ಸಾರ್ಥಕ ಕೆಲಸಗಳಿಗೆ ಅಂಗಗಳನ್ನು ಬಳಸದೆ ಅಪದಾರಿಗೆ ಹೋಗಲು ಬಳಸಿದರೆ ಏನು ಪ್ರಯೋಜನ? ಎಂಬುದು ಬಸವಣ್ಣನವರ ಪ್ರಶ್ನೆ.

ಮಾಸ್ತಿ,ಸಂಗನಾಳಮಠ, ಬಸವನಾಳ/ಅಯ್ಯಂಗಾರ, ಹಕಾರಿ/ಥಿಯೋಡೋರ, ಮೆನೆಜಿಸ್/ಅಂಗಡಿ, ಸಿ.ಎನ್.ಹಿರೇಮಠ, ಪಿ.ಉಮಾಶಂಕರ, ವೆಲೆಬಿಲ್, ಶ್ರೀ ಸಿದ್ಧೇಶ್ವರ ಸ್ವಾಮಿಗಳು, ಮಾತೆ ಮಹಾದೇವಿ, ಡಿ.ಎ.ಶಂಕರ, ಡೋಣೂರಮಠ,ಉಷಾ ಪಾಲಾಕ್ಷಪ್ಪ, ಆರ್ಯ ಆಚಾರ್ಯ ಇವರೆಲ್ಲ ಒಂದಿಲ್ಲ ಒಂದು ಕಡೆ ವಚನದ ಮೂಲ ಅಶಯವನ್ನು ಗ್ರಹಿಸುವುದರಲ್ಲಿ ವಿಫಲರಾಗುತ್ತಾರೆ. ಕೆಲವನ್ನು ಉದಾಹರಿಸಲಾಗಿ, ಮಾಸ್ತಿ I shall not waste time gadding ಎಂದೂ, ಸಂಗನಾಳಮಠರು ಹೆಳವನ ಮಾಡಯ್ಯಾ ತಂದೆ ಎನ್ನುವುದನ್ನು Render me helpless ಎಂದೂ, ಅಂಕಿತವನ್ನು Oh Sangamesh ಎಂದೂ ತಪ್ಪಾಗಿ ಅನುವಾದಿಸುತ್ತಾರೆ. ಹಕಾರಿ/ಥಿಯೋಡೋರ ಅವರದು ಇಂಗ್ಲಿಷ್ ಅನುವಾದವೇ ಅನಿಸುವುದಿಲ್ಲ.

ಪಿ.ಉಮಾಶಂಕರ, a tortoise withdraws its limbs to seek shelter under the root of its shell intimes of danger ಎಂದು ಸಂಬಂಧ ವಿಲ್ಲದ ವಿಚಾರಗಳನ್ನು ತಂದು ವಚನದ ಇಂಗಿತ ಮತ್ತು ಸ್ವರೂಪವನ್ನೇ ಹಾಳು ಮಾಡುತ್ತಾರೆ ಮತ್ತು ವಚನದ ಆಶಯದಿಂದ ಬಹು ದೂರ ಹೋಗುತ್ತಾರೆ. ಬಸವನಾಳ/ ಅಯ್ಯಂಗಾರ ಅವರು ಹೆಳವನಮಾಡಯ್ಯಾ ಎನ್ನುವುದನ್ನು Were I lame, ಅಂದರೆ ಹೆಳವನಾಗಿದ್ದರೆ ಎಂದು ಮತ್ತು ಡೋಣೂರಮಠರು Thou Father, ಎಂದು ತಪ್ಪು ಅನುವಾದ ಮಾಡುತ್ತಾರೆ. ಅಮೂರ ಅವರು ಮಾಡಯ್ಯಾ ಎನ್ನುವುದನ್ನು May I be lame ಎಂದು ಅನುವಾದ ಮಾಡುತ್ತಾರೆ. ಇಂಗ್ಲಿಷ್‌ನಲ್ಲಿ May I be ಎನ್ನುವುದು ಆಜ್ಞಾರ್ಥವನ್ನು ಸೂಚಿಸುತ್ತದೆ. ಆದರೆ ಮೂಲವಚನದಲ್ಲಿ ದೇವರಿಗೆ ಹೆಳವನ ಮಾಡಲು ಒತ್ತಾಯದ ವಿನಂತಿಯಿದೆ.

ಇದ್ದುದರಲ್ಲಿಯೇ ಬಾಗಿ, ಶಿವಪ್ರಕಾಶ್/ನಾಗಭೂಷಣ, ಪರವಾ ಇಲ್ಲ ಎನಿಸಿದರೆ, ಹಳಕಟ್ಟಿ, ರಾಮಾನುಜನ್ ಮತ್ತು ಕೆ.ಈಶ್ವರನ್ ವಚನದ ಆಶಯವನ್ನು ಓದುಗನಿಗೆ ಕೊಡುವಲ್ಲಿ ಯಶಸ್ಸು ಕಾಣುತ್ತಾರೆ.

O Father ,make me a lame man,
That I may not walk hither and thither
O Father ,make me a blind man,
That I may not see how to wander and turn away.
O Father ,make me a deaf man,
That I may not hear anything.
So keep me that I may not be drawn
To any other temptation
Than the feet of thy servants,
O Kudalasangama Deva.

Halakatti (16)

೩. ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು,
ಹಾಡಿ ನಾಲಗೆ ದಣಿಯದು, ಇನ್ನೇವೆನಿನ್ನೇವೆ.
ನಾ ನಿಮ್ಮ ಕೈಯಾರೆ ಪೂಜಿಸಿ ಮನದಣಿಯಲೊಲ್ಲದಿನ್ನೇವೆನಿನ್ನೇವೆ?
ಕೂಡಲಸಂಗಮದೇವಾ ಕೇಳಯ್ಯಾ,
ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ.

ವಚನ ಸಂಖ್ಯೆ –೪೮೭

ಈ ವಚನವನ್ನು ೯ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಸಾತ್ವಿಕವಾದ ಉತ್ಸಾಹ ಆಸಕ್ತಿ ಮತ್ತು ಬದ್ಧತೆಗಳು ಭಕ್ತಿಯೊಂದಿಗೆ ಸೇರಿಕೊಂಡರೆ ಎಂಥಹ ಅನುಭವ ಒದಗುತ್ತದೆ ಎಂಬುದನ್ನು ಇಲ್ಲಿ ಹೇಳಲಾಗಿದೆ. ಲೌಕಿಕ ವಿಚಾರಗಳಲ್ಲಿ ನಮಗೆ ಬೇಗನೆ ದಣಿವು ಉಂಟಾಗುತ್ತದೆ. ಆದರೆ ತತ್ಪರನಾದ ಭಕ್ತನಿಗೆ ಪರಮಾತ್ಮನ ಕುರಿತು ಎಷ್ಟು ಹಾಡಿದರೂ, ಕುಣಿದರೂ, ಪೂಜಿಸಿದರೂ, ದಣಿವು ಕಾಣಿಸದು. ಕುಣಿಯುತ್ತಾ, ಹಾಡುತ್ತಾ, ಪೂಜಿಸುತ್ತಾ ಕೊನೆಗೆ ಪರಮಾತ್ಮನಲ್ಲಿ ಸಾಮರಸ್ಯ ಹೊಂದಬೇಕೆಂಬ ಭಾವ ಇಲ್ಲಿ ಗಟ್ಟಿಗೊಂಡಿದೆ. ಇ.ಪಿ.ರೈಸ್ ಅವರು ಆಡಿ ಕಾಲು ದಣಿಯವು ಎನ್ನುವುದನ್ನು "The leg does not tire of walking" ಬಸವನಾಳರೂ "Walking numbs not the leg" ಎಂದು ಅನುವಾದಿಸಿದ್ದಾರೆ. ಇಲ್ಲಿ ಆಡಿ ಎಂಬುದಕ್ಕೆ ಪರಮಾತ್ಮನ ನಾಮ ನೆನೆದು ಕುಣಿದಾಡಿ ಎಂಬ ಅರ್ಥವಿದ್ದು ನಡೆದಾಡಿ ಎಂಬ ಪದ ಬಳಕೆ ಸರಿ ಕಾಣುವುದಿಲ್ಲ. ಇ.ಪಿ.ರೈಸ್‌ರು the head does not ache with the binding of the hair ಮತ್ತು ಬಸವನಾಳರ nor the plaited hair the head, ಎನ್ನುವ ಸಾಲುಗಳಿಗೆ ಮೂಲವಾದ ಪಾಠ ಇಂದು ಪ್ರಕಟವಾಗಿರುವ ಯಾವ ಕನ್ನಡ ಆವೃತ್ತಿಯಲ್ಲಿ ಎಲ್ಲಿಯೂ ಇಲ್ಲ. ಅವರಿಬ್ಬರೂ ಬಳಸಿದ ಕನ್ನಡ ಆವೃತ್ತಿಯಲ್ಲಿರಬಹುದು. ಇಲ್ಲವೆ ತಪ್ಪು ಕಲ್ಪನೆಯಿಂದ ಸೃಷ್ಟಿಸಿರಲೂಬಹುದು. ಮಾಸ್ತಿಯವರು not tire themselves ಎನ್ನುವುದು ಅಷ್ಟು ಸಮರ್ಪಕ ಎನಿಸುವುದಿಲ್ಲ. ವಚನದ ಇನ್ನೊಂದು ಆಶಯ ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ ಎನ್ನುವುದನ್ನು ರೈಸ್ ಮತ್ತು ಬಸವನಾಳರು ಅನುವಾದಿಸುವ ಗೋಜಿಗೆ ಹೋಗುವುದಿಲ್ಲ. ಮೆನೆಜಿಸ್/ಅಂಗಡಿ ಅವರು What I'd love most to do is burst Thy belly and enter it! ಎಂದು ಅನುವಾಸಿದರೆ, ರೊವೆನೆ ಹಿಲ್/ಪ್ರಭುಶಂಕರ್ ಅವರು I long to split open Your belly and get inside ಎಂದು ಅನುವಾದಿಸುತ್ತಾರೆ. ವೆಲೆಬಿಲ್‌ರು ರಾಮಾನುಜನರ ಅನುವಾದವನ್ನು ಯಥಾವತ್ತಾಗಿ ಭಟ್ಟಿ ಇಳಿಸುತ್ತಾರೆ. ಈ ವಚನದ ಆಶಯವನ್ನು ಹೆಚ್ಚು ಕಡಿಮೆ ಎಲ್ಲ ಅನುವಾದಕರು ಗ್ರಹಿಸಿದ್ದಾರೆ. ಆದರೂ ಅವುಗಳಲ್ಲಿ ಮೆನೆಜಿಸ್/ಅಂಗಡಿ, ರೊವೆನೆ ಹಿಲ್/ಪ್ರಭುಶಂಕರ್ ಮತ್ತು ರಾಮಾನುಜನರ್ ಅನುವಾದಗಳು ವಚನದ ಆಶಯವನ್ನು ಬಿಂಬಿಸುವಲ್ಲಿ ಸಫಲವಾಗಿವೆ. ಅವುಗಳಲ್ಲಿ ಒಂದನ್ನು ಇಲ್ಲಿ ಕೊಡಲಾಗಿದೆ.

Dancing, my legs don't tire,
looking, my eyes don't tire,
singing, my tongue doesn't tire-
what shall I do? What?
My hands keep worshipping You
and my mind doesn't tire-
what shall I do? What?

*Kudala Sangama Deva,* listen,

I long to split open Your bellyand get inside.

Rowene Hill/Prabhushankar(79)

೪. ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ

ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ,

ಕೂಡಲಸಂಗಮದೇವಾ

ನಿಮ್ಮ ಮನೆಯ ಮಗನೆಂದೆನಿಸಯ್ಯಾ.

ವಚನ ಸಂಖ್ಯೆ.-೬೨

ಈ ವಚನವನ್ನು ೧೪ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಮನುಷ್ಯ ಮನುಷ್ಯರಲ್ಲಿ ಸರ್ವಸಮಾನತೆಯನ್ನು ಸಾಧಿಸುವುದರ ಜೊತೆಗೆ ಶರಣರಿಗೆ, ದೇವರಿಗೆ, ಪ್ರಿಯವಾದ ವ್ಯಕ್ತಿಯಾಗಿ ಬಾಳಬೇಕೆಂಬುದು ಈ ವಚನದ ಧ್ವನಿ. ಹಲವಾರು ಜಾತಿಗಳನ್ನು ದೂರೀಕರಿಸಿ ನಮ್ಮವ ಎನಿಸುವ ಪ್ರೀತಿ ತೋರುವಂತಾಗಬೇಕು. ಶರಣರಿಗೆ ಆತ್ಮೀಯನೂ ಗುರುಲಿಂಗ ಜಂಗಮ ದಾಸೋಹಿಯೂ ಆಗಿರಬೇಕು. ದೇವರೊಂದಿಗೆ ಮನೆಯ ಮಗನಂತೆ ನಿಷ್ಠೆ, ಪ್ರೀತಿ, ವಿಶ್ವಾಸದಿಂದ ಭಕ್ತನಾದವನು ಇರಬೇಕು ಎಂದು ಇಲ್ಲಿಯ ಸಂದೇಶ.

ಇವನಾರವ, ಇವನಾರವ, ಕನ್ನಡದಲ್ಲಿ ಬಹಳ ಸಹಜವಾದ ಆಡು ನುಡಿ. ಇಂಗ್ಲಿಷ್‌ನಲ್ಲಿ ಇದಕ್ಕೆ ಸಮಾನವಾದ spoken structure ಕಾಣುವುದು ಕಷ್ಟ. ಹಳಕಟ್ಟಿಯವರ Who are you, Who are you, ಹಕಾರಿ/ಥಿಯೋಡರ ಮತ್ತು ಸಿ.ಎನ್.ಹಿರೇಮಠರ Who is he? ರಾಮಾನುಜನ್ ಮತ್ತು ವೆಲೆಬಿಲ್‌ರ Whose man, ಡಿ.ಎ.ಶಂಕರ Who is this?ಗಿಂತ ಮೆನೆಜಿಸ್/ಅಂಗಡಿಯವರ Whose is he, whose is he, ಎನ್ನುವುದು ಹೆಚ್ಚು ಸೂಕ್ತವೆನಿಸುತ್ತದೆ, ಯಗಟಿಯವರು ವಚನದ ಭಾವಾನುವಾದವನ್ನು ಕೊಡುತ್ತಾರೆ. ಇನ್ನು ಕೆಲವರು ವಚನದ ವಿಷಯಕ್ಕಿಂತಲೂ ಸಂಬಂಧ ಪಡದ ವಿಷಯಗ ಳನ್ನು ನೀಡುತ್ತಾರೆ. ಕೆಲವು ಅನುವಾದಕರು ವಚನದ ಗೇಯತೆಯನ್ನು ಬಿಟ್ಟು ಗದ್ಯಾನುವಾದಕ್ಕೂ ಯತ್ನಿಸಿದ್ದಾರೆ.

ಈ ವಚನವನ್ನು ಮಾಸ್ತಿ, ಯಗಟಿ, ಹಕಾರಿ/ಥಿಯೋಡರ, ರಾಮಾನುಜನ್, ವೆಲೆಬಿಲ್, ಸಿ.ಎನ್.ಹಿರೇಮಠ, ಅನಂತನಾರಾಯಣ, ಬಿ.ವಿರುಪಾಕ್ಷಪ್ಪ, ಡಿ.ಎ.ಶಂಕರ, ಉಷಾ ಪಾಲಾಕ್ಷಪ್ಪ, ಮೊದಲಾದವರು ವಚನದ ಮೂಲ ಆಶಯವನ್ನು ಬಿಂಬಿಸುವಲ್ಲಿ ವಿಫಲರಾಗಿದ್ದಾರೆ. ಹಳಕಟ್ಟಿ, ಮೆನೆಜಿಸ್/ಅಂಗಡಿ ಮತ್ತು ಶಿವಪ್ರಕಾಶ್ ನಾಗಭೂಷಣ ಇವರು ವಚನದ ಮೂಲ ಆಶಯವನ್ನು ಗ್ರಹಿಸುವಲ್ಲಿ ಸಫಲರಾಗಿದ್ದಾರೆ. ಅವರಲ್ಲಿ ಮೆನೆಜಿಸ್/ ಅಂಗಡಿ ಯವರ ಅನುವಾದವನ್ನು ಇಲ್ಲಿ ಉದಾಹರಿಸಬಹುದು:

Let them not say, O Lord,

'Whose is he, whose, O whose?'

let them say rather,'He is ours,

he's ours, he's ours !'

O Kudala Sangama Lord,let me be

A son of Thine own house !

Menezes -Angadi (62)

೫. ಉಳ್ಳವರು ಶಿವಾಲಯವ ಮಾಡಿಹರು

ನಾನೇನ ಮಾಡುವೆನು ? ಬಡವನಯ್ಯಾ.

ಎನ್ನ ಕಾಲೇ ಕಂಬ, ದೇಹವೇ ದೇಗುಲ,

ಸಿರ ಹೊನ್ನ ಕಲಶವಯ್ಯಾ !

ಕೂಡಲಸಂಗಮದೇವಾ ಕೇಳಯ್ಯಾ

ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ವಚನ ಸಂಖ್ಯೆ-೮೨೧

ಇದನ್ನು ೨೮ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಇದು ಮತ್ತೆ ಮತ್ತೆ ಉದಾಹರಿಸುವ ಪ್ರಸಿದ್ಧವಾದ ವಚನ. ಅಂತೆಯೇ ಎಲ್ಲಕ್ಕಿಂತಲೂ ಹೆಚ್ಚು ಜನ ಅನುವಾದಿಸುತ್ತಾರೆ. ದೇವಾಲಯಗಳ ನಿರಾಕರಣೆಯನ್ನು ಇದರಲ್ಲಿ ಕಾಣಲಾಗಿದೆ. ಶ್ರೀಮಂತರಾದವರು ಶಿವಾಲಯವನ್ನು ಮಾಡುತ್ತಾರೆ-ಎಂದು ಬಸವಣ್ಣನವರು ತಮ್ಮನ್ನು ಬಡವನೆಂದು ಕರೆದುಕೊಂಡು ಶಿವಾಲಯ ಮಾಡಲಾರೆನೆಂದು ಹೇಳುತ್ತಾರೆ. ಇದು ಮಾತಿನ ಒಂದು ರೀತಿಯೇ ಹೊರತು ಶ್ರೀಮಂತನಾಗಿದ್ದರೆ ದೇವಾಲಯವನ್ನು ಮಾಡುತ್ತಿದ್ದೆ, ಎಂಬ ಅರ್ಥವನ್ನು ಇದಕ್ಕೆ ಕೊಡಲಾಗದು. ಮುಂದಿನ ಒಂದೊಂದು ಮಾತೂ ವಚನದ ಭಾವನ್ನು ಔನ್ನತ್ಯಕ್ಕೇರಿಸುತ್ತಾ ಬರುತ್ತವೆ. 'ಎನ್ನ ಕಾಲೇ ಕಂಭ' ಎನ್ನುವುದು ಒಂದು ಚಿತ್ರವನ್ನು ಕೊಟ್ಟರೆ, 'ದೇಹವೇ ದೇಗುಲ' ಎಂಬುದು ಅದನ್ನು ಇನ್ನೂ ವ್ಯಾಪಕಗೊಳಿಸುತ್ತದೆ. "ಶಿರ ಹೊನ್ನ ಕಳಸ" ಎಂಬುದಂತೂ ಅತ್ಯಂತ ಉನ್ನತಸ್ಥಿತಿಯನ್ನು ಹೊಳೆಯಿಸಿ ತೋರುತ್ತದೆ. ಇಡೀ ದೇಹವೇ ಜಂಗಮ ದೇವಾಲಯವಾಗುತ್ತದೆ. ಆದರೆ "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಇನ್ನೂ ಮೀರಿ ಮೀರಿ ಬೆಳೆಯುತ್ತದೆ, ಬಹುಶ: ಕೊನೆಯ ಅರ್ಥವನ್ನು ಹೇಳಿ ಮುಗಿಸಲಾಗದಷ್ಟು ಬೆಳೆಯುತ್ತಾ ಹೋಗುತ್ತದೆ. ಈ ದೇಹ ಶಾಶ್ವತವಲ್ಲ. ಇದೂ ಅಳಿಯುತ್ತದೆ. ಇದರ ಒಳಗಿರುವ ಚೈತನ್ಯ, ಈ ಗುಡಿಯ ಒಳಗಿರುವ ಒಡೆಯ, ಅವನು ಶಾಶ್ವತ. ಆ ಶಾಶ್ವತ ತತ್ತ್ವಕ್ಕೆ ಅಳಿವಿಲ್ಲ. ಸ್ಥಾವರ ದೇವಾಲಯದ ಬದಲಾಗಿ ದೇಹವನ್ನೇ ದೇಗುಲ ಮಾಡಿಕೊಳ್ಳಬೇಕೆನ್ನುವ ಅವರ ಜಂಗಮವಿಚಾರ ವಿಶ್ವಮಾನ್ಯವಾದುದು.

ಇ.ಪಿ.ರೈಸ ಅವರು ಈ ವಚನದ ಭಾವ ಗ್ರಹಿಸುವಲ್ಲಿ ಮೊದಲಿಗೆ ವಿಫಲರಾಗುತ್ತಾರೆ. Those who have means will not devote them to the building of a temple to God (Siva). Then I though poor man will build Thee one" ಅಂದರೆ ಶ್ರೀಮಂತರು (ಉಳ್ಳವರು) ಶಿವಾಲಯ ಕಟ್ಟಲು ತೊಡಗಿಸಿಕೊಳ್ಳುವುದಿಲ್ಲ ಆದರೆ ಬಡವನಾದ ನಾನು ನಿನಗೊಂದು ಶಿವಾಲಯ ಕಟ್ಟುತ್ತೇನೆ-ಎಂಬ ಅರ್ಥ ಬರುವಂತೆ ಅನುವಾದಿಸಿದ್ದಾರೆ. ಕೊನೆಯ ಸಾಲುಗಳಲ್ಲಿ The fixed temples of stone will

come to an end; but this movable temple of the spirit will never perish ಎನ್ನುವಲ್ಲಿ ಹೆಚ್ಚು ಜನ ಅನುವಾದಕರು ಎಡವಿದಲ್ಲಿ ಇವರು ಯಶಸ್ಸು ಕಾಣುತ್ತಾರೆ.

ಹಳಕಟ್ಟಿಯವರು ಉತ್ತಮ ಅನುವಾದವನ್ನು ಒದಗಿಸಿದ್ದಾರೆ. ಆದಾಗ್ಯೂ ಕೊನೆಯ ಸಾಲುಗಳ ಅನುವಾದ ತಪ್ಪಿ ಹೋಗಿರುತ್ತದೆ. ಅದನ್ನು ಸಂಪಾದಕರು ನಂತರದಲ್ಲಿ ಸೇರಿಸುವುದರೊಂದಿಗೆ ವಚನದ ಆಶಯವನ್ನು ಪೂರ್ತಿಗೊಳಿಸುತ್ತಾರೆ. ಮಾಸ್ತಿಯವರು ವಾಕ್ಯ ಸಂಯೋಜನೆಯಲ್ಲಿ ಎಡವಿದ್ದಾರೆ. ಉದಾ: What I shall build? ಎನ್ನುವುದು What shall I build? ಆಗಬೇಕಿತ್ತು. ಅಲ್ಲದೆ ಕೊನೆಯ ಸಾಲುಗಳನ್ನು ತಪ್ಪಾಗಿ ಗ್ರಹಿಸುತ್ತಾರೆ. ಸಂಗನಾಳಮಠರು ಇಡೀ ವಚನದ ಜೀವಾಳವಾಗಿರುವ ಕೊನೆಯ ಸಾಲುಗಳನ್ನು ಅನುವಾದಿಸದೆ ಬಿಡುತ್ತಾರೆ. ಬಸವನಾಳ/ಅಯ್ಯಂಗಾರರ ಅನುವಾದ ನಿರೀಕ್ಷೆಯ ಮಟ್ಟಕ್ಕೆ ಏರುವುದಿಲ್ಲ. ಮಾಸ್ತಿ, ಯಗಟಿ, ಬಾಗಿ, ಪಿ.ಶಾಮರಾವ್, ಪಿ.ಬಿ.ದೇಸಾಯಿ, ಯಾಮುನಾಚಾರ್ಯ,ವೆಲೆಬಿಲ್, ಸಿ.ಎನ್.ಹಿರೇಮಠ, ಅನಂತನಾರಾಯಣ, ಮಾತೆ ಮಹಾದೇವಿ, ಶಿವಪ್ರಕಾಶ್/ನಾಗಭೂಷಣ, ಡೋಣೂರಮಠ, ದಿ.ಸೈನ, ಉಷಾ ಪಾಲಾಕ್ಷಪ್ಪ, ಆರ್ಯ ಆಚಾರ್ಯ ಮೊದಲಾದವರು ವಚನದ ಮೂಲ ಆಶಯವನ್ನು ಅದರಲ್ಲೂ ಕೊನೆಯ ಸಾಲುಗಳಲ್ಲಿ ಬರಬೇಕಾದ ಅರ್ಥ ತರುವಲ್ಲಿ ವಿಫಲರಾಗಿದ್ದಾರೆ. ಸಿ.ಎನ್.ಹಿರೇಮಠ ಅವರು Elan Vital ಎನ್ನುವ ಪದ ಬಳಸಿದರೂ ಅದು ಸಮರ್ಪಕವೆನಿಸುವುದಿಲ್ಲ. ಅಲ್ಲದೆ ಬಳಕೆಯಲ್ಲಿಲ್ಲದ ಪದವನ್ನು ಬಳಸುವುದರಿಂದ ಅನುವಾದ ಜಟಿಲಗೊಳ್ಳುತ್ತದೆ.

ಪರವಾಯಿಲ್ಲ ಎನ್ನುವ ಮಟ್ಟಿಗೆ ಕೆ.ಈಶ್ವರನ್, ಡಿ.ಎ.ಶಂಕರ, ರಾಮಾನುಜನ್, ರೊವೆನೆ ಹಿಲ್ಸ್/ ಪ್ರಭುಶಂಕರ, ಮೆನೆಜಿಸ್/ಅಂಗಡಿ ಅವರು ಅನುವಾದ ಮಾಡಿದ್ದಾರೆ. ಇಷ್ಟು ಅನುವಾದಗಳಲ್ಲಿ ಹಕಾರಿ/ ಥಿಯೋಡೋರ ಅವರ ಅನುವಾದ ವಚನದ ಆಶಯದ ಸಮೀಪ ಬರುತ್ತದೆ.

The rich raise temples,
but poor as I am-
this, I shall do-
my legs for pillars,
my body for sanctum,
my head, the golden *kalasa*
complete.
O hearken! Lord Kudala Sangama-
matter passes ,
but spirit adides.

Theodore-Hakari (34)

೬. ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು,
ನೆನೆದು ಮೃದುವಾಗಬಲ್ಲುದೇ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ,
ಮನದಲ್ಲಿ ಧೃಡವಿಲ್ಲದನ್ನಕ್ಕ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರ ವಿಧಿ ಎನಗಾಯಿತ್ತು, ಕೂಡಲಸಂಗಮದೇವಾ.

ವಚನ ಸಂಖ್ಯೆ-೯೯

ಈ ವಚನವನ್ನು ೧೫ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಕಲ್ಲು ಎಷ್ಟು ಕಾಲ ನೀರಿನಲ್ಲಿದ್ದರೂ ನೆನೆದು ಮೃದುವಾಗಲಾರದು. ಧೃಡತೆಯಿಲ್ಲದ ಭಕ್ತನ ಪೂಜೆಯಿಂದ ದೇವರು ಒಲಿಯುವದಿಲ್ಲ. ಸಂಪತ್ತನ್ನು ಕಾಯುತ್ತ ಕೂತ ಭೂತಕ್ಕೆ ಅದರ ಫಲ ದೊರೆಯುವದಿಲ್ಲ. ಧೃಡವಿಲ್ಲದಪೂಜೆ ಮಾಡಿದ ಮನಸ್ಸಿಗೆ ನಿಜ ಆನಂದ ದೊರೆಯುವದಿಲ್ಲ. ತೋರಿಕೆಯ ಭಕ್ತಿ ಇದೇ ತೆರನಾಗಿರುತ್ತದೆ. ಧೃಡವಾದ ಭಕ್ತಿಯಿಂದ ಸಾಧನೆಯಲ್ಲಿ ಮುನ್ನಡೆದರೆ ಲಿಂಗಸುಖವನ್ನು ಅನುಭವಿಸುವುದು ಸಾಧ್ಯ. ಭಕ್ತನಾದವನು ಮನಸ್ಸಿನ ಚಂಚಲತೆಯನ್ನು, ಅಪನಂಬಿಕೆಯನ್ನು ನೀಗಿಸಿಕೊಂಡು ಧೃಡತೆಯನ್ನು ಪಡೆಯಬೇಕು. ಪೂಜೆಗೂ ಧೃಡತೆಗೂ ಲಿಂಗದ ಒಲುಮೆಗೂ ನೇರವಾದ ಸಂಬಂಧವಿದೆ.

ಈ ವಚನವನ್ನು ಮೂರು ಭಾಗಗಳಾಗಿ ನೋಡಿದರೆ ೧. ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು, ನೆನೆದು ಮೃದುವಾಗಬಲ್ಲುದೇ? ೨. ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ, ಮನದಲ್ಲಿ ಧೃಡವಿಲ್ಲದನ್ನಕ್ಕ? ೩. ನಿಧಾನವ ಕಾಯ್ದಿರ್ದ ಬೆಂತರನಂತೆ ಅದರ ವಿಧಿ ಎನಗಾಯಿತ್ತು, ಕೂಡಲಸಂಗಮದೇವಾ– ಮೊದಲನೆಯ ಭಾಗದಲ್ಲಿ ಹೆಚ್ಚು ಕಡಿಮೆ ಎಲ್ಲ ಅನುವಾದಕರು ಅದನ್ನು ಸರಿಯಾಗಿಯೇ ಅನುವಾದಿಸುತ್ತಾರೆ. ಎರಡನೆಯ ಭಾಗದಲ್ಲಿ ಬಸವನಾಳ–ಅಯ್ಯಂಗಾರ ಅವರು It's all a lost endeavour. When the mind is proving wayward, what good can seeming worship do–ಎಂದು ಸುತ್ತು ಬಳಸಿ ಹೇಳಲು ಪ್ರಯತ್ನಿಸುತ್ತಾರೆ. ಮಾಸ್ತಿ ಮತ್ತು ಬಾಗಿಯವರ ಅಭಿವ್ಯಕ್ತಿಗಳೂ ಸಮರ್ಪಕವೆನಿಸುವುದಿಲ್ಲ. ಸಿದ್ಧಪ್ಪಾರಾಧ್ಯ ಅವರು ಇಲ್ಲದ ವಿಚಾರಗಳನ್ನು ವಿಸ್ತೃತವಾಗಿ ಹೇಳಿ ವಚನದ ಆಶಯವನ್ನು ಮಸಕುಗೊಳಿಸುತ್ತಾರೆ. ಪಿ.ಶಾಮರಾವ್, ಅನಂತನಾರಾಯಣ, ವಿರುಪಾಕ್ಷಪ್ಪ, ಡಿ.ಎ.ಶಂಕರ, ದಿಸ್ಸೈನ್, ಉಷಾಪಾಲಾಕ್ಷಪ್ಪ, ಆರ್ಯ ಆಚಾರ್ಯ ಇವರೆಲ್ಲರೂ ನಿರೀಕ್ಷಿತ ಮಟ್ಟವನ್ನು ತಲುಪಲು ವಿಫಲರಾಗುತ್ತಾರೆ.

ಮೂರನೆಯ ಭಾಗದಲ್ಲಿ "ನಿಧಾನವ ಕಾಯ್ದಿರ್ದ ಬೆಂತರನಂತೆ ಅದರ ವಿಧಿ ಎನಗಾಯಿತ್ತು, ಕೂಡಲಸಂಗಮದೇವಾ" ಇಡೀ ವಚನದ ತಾತ್ಪರ್ಯ ಹೇಳುವ ಸಾಲುಗಳಿವು. ವಚನಾನುವಾದದ ಸಾಫಲ್ಯ ಈ ಸಾಲುಗಳನ್ನು ಅವಲಂಬಿಸಿದೆ. ಮಾಸ್ತಿ, ಬಸವನಾಳ–ಅಯ್ಯಂಗಾರ ಅವರು ಈ ಭಾಗವನ್ನು ಅನುವಾದಿಸುವ ಗೋಜಿಗೆ ಹೋಗುವುದಿಲ್ಲ. ಬೆಂತರ ಅಂದರೆ ಭೂತ ಎಂದರ್ಥ. ಅದನ್ನು ಗ್ರಹಿಸದೇ ಸಿದ್ಧಪ್ಪಾರಾಧ್ಯ cobra ಎಂದು ತಪ್ಪು ಅರ್ಥೈಸುತ್ತಾರೆ. ಯಗಟಿ, ಪಿ.ಶಾಮರಾವ್, ಎ.ಕೆ.ರಾಮಾನುಜನ್, ಮೆನೆಜಿಸ್/ ಅಂಗಡಿ, ಡಿ.ಎ.ಶಂಕರ, ವಚನದ ಆಶಯವನ್ನು ಈ ಭಾಗದಲ್ಲಿ ತರಲು ಯಶಸ್ವಿಯಾಗಿದ್ದಾರೆ. ಉಷಾ

ಪಾಲಾಕ್ಷಪ್ಪ, ಆರ್ಯಆಚಾರ್ಯ, ಅನಂತನಾರಾಯಣ, ವಿರುಪಾಕ್ಷಪ್ಪ, ಸಿದ್ಧಪ್ಪಾರಾಧ್ಯ, ದಿಸ್ಸೈನ್, ಮೂಲ ಅರ್ಥ ಮತ್ತು ಆಶಯವನ್ನು ಅನುವಾದಿಸಲು ವಿಫಲರಾಗುತ್ತಾರೆ.

ವ್ಹೆಲೆಬಿಲ್ ಅವರು ಎ.ಕೆ.ರಾಮಾನುಜನ್ ಮತ್ತು ಮೆನೆಜಿಸ್/ಅಂಗಡಿಯವರನ್ನು ನಕಲು ಮಾಡಿ ತಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳುತ್ತಾರೆ. ಒಟ್ಟಿನಲ್ಲಿ ಈ ವಚನದ ಪೂರ್ಣ ಆಶಯವನ್ನು ಮೆನೆಜಿಸ್/ಅಂಗಡಿ ಯವರು ತರುವಲ್ಲಿ ಯಶಸ್ಸು ಕಾಣುತ್ತಾರೆ.

How long so ever a stone
May lie in water, can it
By soaking turn soft?
However long I worship Thee,
What boot is, if I lack
A resolute mind?
My plight is like a spirit's
Guarding a treasure trove,
O Lord Kudala Sangama,

-Menezes / Angadi (99)

೭. ಎನ್ನ ಕಾಯವ ದಂಡಿಗೆಯ ಮಾಡಯ್ಯಾ,
ಎನ್ನ ಶಿರವ ಸೋರೆಯ ಮಾಡಯ್ಯಾ,
ಎನ್ನ ನರವ ತಂತಿಯ ಮಾಡಯ್ಯಾ,
ಎನ್ನ ಬೆರಳ ಕಡ್ಡಿಯ ಮಾಡಯ್ಯಾ,
ಬತ್ತೀಸ ರಾಗವ ಪಾಡಯ್ಯಾ, ಉರದಲೊತ್ತಿ ಬಾರಿಸು,
ಕೂಡಲಸಂಗಮದೇವಾ.

ವಚನ ಸಂಖ್ಯೆ.-೪೯೯

ಈ ವಚನವನ್ನು ೨೧ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಬಸವಣ್ಣನವರು ಈ ವಚನದಲ್ಲಿ ಒಂದು ರೂಪಕದ ಮೂಲಕ ಅರ್ಪಣೆಯ ಭಾವವನ್ನು ವ್ಯಕ್ತಪಡಿಸಿದ್ದಾರೆ. ಭಕ್ತನ ದೇಹವನ್ನು ದಂಡಿಗೆಯ ತೆರನಾಗಿ ನುಡಿಸುವ ವಾದ್ಯದಂತೆ ದೇವರಿಗೆ ಇಲ್ಲಿ ಅರ್ಪಿಸಲಾಗಿದೆ. ಸೊಗಸಾದ ದಂಡಿಗೆ ಎಂಬ ತಂತಿವಾದ್ಯವನ್ನು ಬಿಗಿಯಾಗಿ ಹಿಡಿದು ತನ್ಮಯವಾಗಿ ನುಡಿಸುವ ಸಂಗೀತಗಾರನ ಹಾಗೆ ದೇವರು ಈ ದೇಹವನ್ನು ಬಳಸಿಕೊಳ್ಳಲಿ ಎನ್ನುತ್ತಾರೆ. ಸಂಗೀತಗಾರನಿಂದಾಗಿ ದಂಡಿಗೆಯ ಮುಖಾಂತರ ಅನುಪಮ ಸಂಗೀತ ಹೊರಹೊಮ್ಮುವಂತೆ, ದೇವರಿಗೆ ಅರ್ಪಿತವಾಗುವ ದೇಹವು ಅಮೂಲ್ಯವಾಗುತ್ತದೆ, ಅಪ್ರತಿಮವಾಗುತ್ತದೆ. ವೀಣೆ, ದಂಡ, ತಂತಿ, ಕಡ್ಡಿಗಳನ್ನು ದೇಹ, ತಲೆ ನರ ಬೆರಳುಗಳಿಗೆ ಹೋಲಿಸಲಾಗಿದೆ.

ದಂಡಿಗೆ ತಾನೇ ಒಂದು ವಾದ್ಯವಲ್ಲ, ತಂತಿವಾದ್ಯಗಳಲ್ಲಿ ಆಧಾರ ಕೋಲು. ದಂಡಿಗೆಗಾಗಿ Lute, Lute Shaft,Ektar, Veena, Thambura, Stringed Instrument, Beam of Lyre, Wooden Bar, ಎಂದು ವಿವಿಧ ಬಗೆಯ ಅನುವಾದಿತ ಶಬ್ದಗಳನ್ನು ಬಳಸುತ್ತಾರೆ. ಸೋರೆಯನ್ನು ಬಹುತೇಕ ಅನುವಾದಕರು gourd ಎಂದು ಸರಿಯಾಗಿಯೇ ಗುರುತಿಸಿದ್ದಾರೆ. ನರ ಮತ್ತು ತಂತಿಯನ್ನು ಅನುವಾದಿಸುವಲ್ಲಿ ಯಾರಿಗೂ ಗೊಂದಲವಿಲ್ಲ. ಬೆರಳ ಕಡ್ಡಿ ಇದನ್ನು ಅನುವಾದಿಸುವಲ್ಲಿ triking stick, strikers,plucking rods,tuning sticks,plectrum, playing rods, tuning pin,strumming stick, ಎಂದು ವಿವಿಧ ಶಬ್ದ ಬಳಸಿದರೂ ಅದು plectrum ಮತ್ತು strumming stickನಲ್ಲಿ ತನ್ನ ಪೂರ್ಣ ಅರ್ಥಕಂಡುಕೊಳ್ಳುತ್ತದೆ.

ಉರದಲೊತ್ತಿ ಬಾರಿಸು, ಪದಪುಂಜ ಶ್ಲೇಷಾರ್ಥ ಹೊದಿದ್ದು ಹಲವರು ಆ ತಂತು ವಾದ್ಯವನ್ನು ಎದೆಗವಚಿಕೊಂಡು ಬಾರಿಸು ಎಂತಲೂ ಇನ್ನು ಕೆಲವರು ಆ ತಂತುವಾದ್ಯದ ಹೃದಯಭಾಗವನ್ನು ಒತ್ತಿ ನುಡಿಸೆಂತಲೂ ಅರ್ಥೈಸಿದ್ದಾರೆ. ಈ ಎರಡೂ ಅರ್ಥಗಳಿಗೂ ಅಲ್ಲಿ ಎಡೆಯುಂಟು. ಆದರೂ ಎದೆಗವಚಿಕೊಂಡು ಬಾರಿಸು ಅರ್ಥವು ಹೆಚ್ಚು ಸೂಕ್ತ.

ಉಷಾಪಾಲಾಕ್ಷಪ್ಪ, ವೆಂಕಟರೆಡ್ಡಿ ದೇಸಾಯಿ ಯಗಟಿ, ಶಾಮರಾಮ, ಯಮುನಾಚಾರ, ಸಿ.ಎನ್.ಹಿರೇಮಠ, ಪಿ.ಉಮಾಶಂಕರ, ಶ್ರೀಸಿದ್ದೇಶ್ವರ ಸ್ವಾಮೀಜಿ, ವೆಲೆಬಿಲ್, ಇವರು ಅಲ್ಲಲ್ಲಿ ವಚನದ ಮೂಲ ಆಶಯವನ್ನು ತಲಪಲು ವಿಫಲರಾಗುತ್ತಾರೆ. ಮಾಸ್ತಿ, ಹಕಾರಿ–ಥಿಯೋಡೋರ್, ಶಿವಪ್ರಕಾಶ–ನಾಗಭೂಷಣ, ಎ.ಕೆ.ರಾಮಾನುಜನ್, ಕೆ.ಈಶ್ವರನ್, ವಿರುಪಾಕ್ಷಪ್ಪಾ, ಇವರು ವಚನದ ಆಶಯವನ್ನು ತರುವಲ್ಲಿ ತಕ್ಕಮಟ್ಟಿಗೆ ಯಶಸ್ಸು ಕಂಡಿದ್ದಾರೆ. ಎಲ್ಲ ದೃಷ್ಟಿಯಿಂದಲೂ ವಚನದ ಆಶಯವನ್ನು ಗುರುತಿಸಿ ಅನುವಾದಿಸುವಲ್ಲಿ ಮೆನೆಜಿಸ್/ಅಂಗಡಿ ಸಫಲರಾಗಿದ್ದಾರೆ.

Make of my body, Lord, the pole;
Make of my head, the gourd;
Make of my nerves the wires, O Lord,
And of my fingers the plectrum make;
Intone Thy two-and-thirty notes;
Press my heart and play
O Kudala Sangama Lord!

Menezes – Angadi (498)

೮. ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ,
ಕೂಡಲಸಂಗಮದೇವಾ, ಎನಗಿದೇ ದಿಬ್ಯ

ವಚನ ಸಂಖ್ಯೆ–೩೩೫

ಈ ವಚನವನ್ನು ೧೮ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ವಿನಯ ವಿಧೇಯತೆಗಳು ಭಕ್ತಿಗೆ ಅತ್ಯಂತ ಮುಖ್ಯ. ಅಹಂಕಾರದ ಲವಲೇಶ ಕೂಡ ಭಕ್ತಿಯನ್ನು ನಾಶಗೊಳಿಸುತ್ತದೆ. ಅದಕ್ಕಾಗಿ ಇಲ್ಲಿ

ಬಸವಣ್ಣನವರು ತಮ್ಮ ಕಿರಿತನವನ್ನು ಹೇಳಿಕೊಂಡು, ಶಿವಭಕ್ತರ ಹಿರಿತನವನ್ನು ಎತ್ತಿ ತೋರಿದ್ದಾರೆ. ಪ್ರತಿಯೊಬ್ಬ ಭಕ್ತನಿಗೆ, ಸಾಧಕನಿಗೆ ಎಲ್ಲರಿಗಿಂತ ನಾನು ಕಿರಿಯ ಎಂಬ ಭಾವ ಅಗತ್ಯವಾಗಿ ಬೇಕು. ಅದರಿಂದ ಅಹಂ ನಾಶವಾಗಲು ಸಾಧ್ಯವಾಗುತ್ತದೆ. ಎಲ್ಲ ಶಿವಭಕ್ತರೂ ಶ್ರೇಷ್ಠರೂ, ದೊಡ್ಡವರು, ಗೌರವಾನ್ವಿತರು ಎಂಬ ಪ್ರಜ್ಞೆ ಭಕ್ತನಲ್ಲಿ ಸದಾ ಎಚ್ಚರವಾಗಿರಬೇಕು. ಇದು ಭೃತ್ಯಾಚಾರವನ್ನು ಸೂಚಿಸುವ ವಚನವಾಗಿದೆ.

ಈ ವಚನದ ಕೊನೆಯ ಸಾಲಿನಲ್ಲಿ ಬರುವ 'ಎನಗಿದೇ ದಿಬ್ಯ' ಪದಪುಂಜವನ್ನು ಹೊರತು ಪಡಿಸಿ ಹೆಚ್ಚು ಕಡಿಮೆ ಎಲ್ಲ ಅನುವಾದಕಾರರೂ ವಚನವನ್ನು ಸರಿಯಾಗಿಯೇ ಅನುವಾದಿಸಿದ್ದಾರೆ. ಈ ಪದವನ್ನು ಅನುವಾದಿಸುವ ಗೋಜಿಗೆ ಹೋಗದ ಮಾಸ್ತಿ, ಸಂಗನಾಳಮಠ, ಬಸವನಾಳ–ಅಯ್ಯಂಗಾರ, ಅವರು ವಚನದ ಮೂಲ ಆಶಯಕ್ಕೆ ಕೊರತೆ ತಂದಿದ್ದಾರೆ. ಬಾಗಿ, ಹಕಾರಿ–ಥಿಯೋಡೋರ, ಸಿ.ಎನ್.ಹಿರೇಮಠ, ವೆಲೆಬಿಲ್, ಅನಂತನಾರಾಯಣ, ಮೂರುಶಿಳ್ಳಿ ಬಸವರಾಜ, ವಿರುಪಾಕ್ಷಪ್ಪ, ಡಿ.ಎ.ಶಂಕರ, ಆರ್ಯ ಆಚಾರ್ಯ ಇವರು ಆ ಪದಪುಂಜವನ್ನು ತಪ್ಪಾಗಿ ಅನುವಾದಿಸುತ್ತಾರೆ.

ವಚನ ಚಿಕ್ಕದಿದ್ದರೂ ಅದನ್ನು ಅನುವಾದಕರು ಕೆಲವೊಮ್ಮೆ ಅಸಂಬದ್ಧವಾಗಿ ಎಳೆದದ್ದೂ ಉಂಟು. ಅಂಥ ಕೆಟ್ಟ ಉದಾಹರಣೆಗೆ ಉಷಾ ಪಾಲಾಕ್ಷಪ್ಪ ಸೇರುತ್ತಾರೆ.

ಯಗಟಿ, ಮೆನೆಜಿಸ್/ಅಂಗಡಿ, ಪಿ.ಬಿ.ದೇಸಾಯಿ, ಪಿ.ಉಮಾಶಂಕರ ಅವರು ದಿಬ್ಯ ಎನ್ನುವುದನ್ನು ordeal,test, acid test, supreme ordeal ಎಂದು ಅನುವಾದಿಸಿ ಅದಕ್ಕೆ ನ್ಯಾಯ ಒದಗಿಸಿಕೊಡುತ್ತಾರೆ.

ಈ ವಚನದ ಪೂರ್ಣ ಆಶಯವನ್ನು ಮೆನೆಜಿಸ್/ಅಂಗಡಿ ಮತ್ತು ಪಿ.ಬಿ.ದೇಸಾಯಿ ಅನುವಾದಿಸುವಲ್ಲಿ ಯಶಸ್ಸು ಕಾಣುತ್ತಾರೆ.

A lesser man that I
No, there is none;
Greater than Siva's devotees
No, there is none;
Witness Thy feet,
Witness my mind :
This is a test for me,
Lord Sangama !

-Menezes / Angadi (334)

Smaller than I, is none,
Greater than a devotee ,is none,
O God of Kudala Sangama, I proclaim!
Your blessed feet are witness, so is my mind;
This is my supreme ordeal.

P.B.Desai (5)

೯. ಏನಿ ಬಂದಿರಿ, ಹದುಳವಿದ್ದಿರೆ ಎಂದಡೆ
ನಿ[ಮ್ಮೈ]ಸಿರಿ ಹಾರಿ ಹೋಹುದೆ ?
ಕುಳ್ಳಿರೆಂದಡೆ ನೆಲ ಕುಳಿ ಹೋಹುದೆ?
ಒಡನೆ ನುಡಿದಡೆ ಸಿರ, ಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ
ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವಯ್ಯ?

ವಚನ ಸಂಖ್ಯೆ-೨೪೧

ಈ ವಚನವನ್ನು ೧೨ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಲೌಕಿಕ ಬದುಕಿನ ನಡೆ, ನುಡಿ ಆಚಾರ ವರ್ತನೆಗಳೆಲ್ಲ ನಮ್ಮ ಸಂಸ್ಕಾರ ಬಲವನ್ನು ಅವಲಂಬಿಸಿರುತ್ತವೆ. ಇದು ನಮ್ಮ ಆಧ್ಯಾತ್ಮಿಕ ಸಾಧನೆಗೂ ಸಂಬಂಧ ಪಡೆಯುತ್ತದೆ. ಮನೆಗೆ ಬಂದವರನ್ನು ಪ್ರೀತಿ ವಿಶ್ವಾಸ ಗೌರವ ಆದರಗಳಿಂದ ಸ್ವಾಗತಿಸಿ ಉಪಚರಿಸಬೇಕು. ಅವರಿಗೆ ಕೊಡಲು ನಮ್ಮಲ್ಲಿ ಯಾವ ವಸ್ತು ಇಲ್ಲದಿದ್ದರೂ ಗುಣಗಳಿಂದ ಒಲಿಸಿಕೊಳ್ಳಬಹುದು. ಅತಿಥಿಗಳೊಂದಿಗೆ ಸಜ್ಜನಿಕೆ ಸೌಜನ್ಯದ ವರ್ತನೆ ಇಲ್ಲದಿದ್ದರೆ ಅಂಥಹ ಭಕ್ತಿ ದೇವರಿಗೂ ಕೂಡ ಪ್ರಿಯವಾಗುವುದಿಲ್ಲ. ಪ್ರೀತಿಯಿಂದ ಮಾತನಾಡಿದರೆ ನಿ[ಮ್ಮೈ]ಸಿರಿ ಹಾರಿ ಹೋಗುವುದಿಲ್ಲ ಮತ್ತು ಕುಳ್ಳಿರಿ ಎಂದರೆ ನೆಲ ಕುಳಿ ಬೀಳುವುದಿಲ್ಲ ಎಂದು ಬಸವಣ್ಣನವರು ವಿಡಂಬಿಸುತ್ತಾರೆ.

ಈ ವಚನದ ಆಶಯವನ್ನು ಗುರುತಿಸುವಲ್ಲಿ ಬಹುತೇಕ ಅನುವಾದಕರು ವಿಫಲರಾಗುತ್ತಾರೆ. ನಾಲ್ಕು ಭಾಗಗಳಲ್ಲಿ

೧. ಏನಿ ಬಂದಿರಿ, ಹದುಳವಿದ್ದಿರೆ ಎಂದಡೆ ನಿ[ಮ್ಮೈ]ಸಿರಿ ಹಾರಿ ಹೋಹುದೆ ?

೨. ಕುಳ್ಳಿರೆಂದಡೆ ನೆಲ ಕುಳಿ ಹೋಹುದೆ?

೩. ಒಡನೆ ನುಡಿದಡೆ ಸಿರ, ಹೊಟ್ಟೆಯೊಡೆವುದೆ?

೪. ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವಯ್ಯ? ವಿಂಗಡಣೆಯಾಗುವ ವಚನದ ಅನುವಾದದಲ್ಲಿ ೧೧ ಜನ ವಿದ್ವಾಂಸರು ಒಂದಿಲ್ಲೊಂದು ಭಾಗದಲ್ಲಿ ಎಡವುತ್ತಾರೆ. ನಿ[ಮ್ಮೈ]ಸಿರಿ ಎನ್ನುವ ಪದ ಏನು ನಿಮ್ಮ ಗಂಟು ಹೋಗುತ್ತದೆ ಎನ್ನುವ ಆಡು ಭಾಷೆಯ ಸುಧಾರಿತ ಪದ. ಇದನ್ನು ನಿಮ್ಮ ಮೈಸಿರಿ ಎಂದು ಮೆನೆಜಸ್-ಅಂಗಡಿ ಮತ್ತು ವಿರುಪಾಕ್ಷಪ್ಪ ತಪ್ಪು ಅರ್ಥೈಸುತ್ತಾರೆ. ೧೦ ಜನ ಅನುವಾದಕರು ನಿಮ್ಮ ಐಸಿರಿ ಎಂದು ಸರಿಯಾಗಿ ಗುರುತಿಸುತ್ತಾರೆ. ಪಿ.ಬಿ.ದೇಸಾಯಿಯವರು ಅಪೂರ್ಣ ಅನುವಾದದಿಂದ ಗಣನೆಗೆ ಬರುವುದಿಲ್ಲ. ಪಿ. ಶಾಮರಾವ ಅವರು ಶಬ್ದಶಃ ಅರ್ಥ ಒದಗಿಸುತ್ತಾರೆ.

ಕುಳ್ಳಿರೆಂದಡೆ ನೆಲ ಕುಳಿ ಹೋಹುದೆ? ಎಂಬುದನ್ನು ಮಾಸ್ತಿಯವರು If you say, 'be seated' will your head or your abdomen split? ಯಗಟಿ He were to ask the welfare of another? What does one lose by courteous words? ಎಂದು ಅನುವಾದಿಸಿ ಅದರ ಮೂಲ ಆಶಯವನ್ನೇ ತಪ್ಪಿಸುತ್ತಾರೆ. ಇದ್ದುದರಲ್ಲಿ ಶಾಮರಾವ ಅವರ Will the ground sag if you ask them to sit ? ಹಕಾರಿ-ಥಿಯೋಡೋರ್ ಅವರ You offer a seat,Would the earth crack at

your feet? ಡಿ.ಎ.ಶಂಕರ ಅವರ Would the floor develop pot-holes? ಶಿವಪ್ರಕಾಶ/ನಾಗಭೂಷಣ ಅವರ Smaller than I, is none,

Greater than a devotee, is none,
O God of Kudala Sangama, I proclaim!
Your blessed feet are witness, so is my mind;
This is my supreme ordeal.

P.B.Desai (5)

If you say 'Sit down please' Will the earth give away ಅನ್ನುವುದು ಯೋಗ್ಯವೆನಿಸುತ್ತದೆ.

ಮೂರನೆಯ ಮತ್ತು ನಾಲ್ಕನೆಯ ಭಾಗಗಳಲ್ಲಿಯೂ ವಿದ್ವಾಂಸರು ಎಡವುತ್ತಾರೆ. ಅನುವಾದಿತ ವಚನಗಳಲ್ಲಿ ಶಿವಪ್ರಕಾಶ/ನಾಗಭೂಷಣ ಅವರ ಅನುವಾದ ಸಮರ್ಪಕ ವೆನಿಸುತ್ತದೆ ಇಡೀ ಅನುವಾದವು ಒಪ್ಪಿತವೆನುಸತ್ತದೆ.

If you say;
What brings you ?
Are you well?
Will all your riches flee?
If you say 'Sit down please',
Will the earth give away?
If you speak straight away
Will your head and tummy fall apart ?
If you can't be generous,Forget it,
If you don't have this much goodness,
Will not Kudalasangama,the matter,cut off your nose ?

-H.S.Shivaprakash
O.L. Nagabhushanaswami (146)

೧೦. ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದಡೆ ನಿಲಲುಬಾರದು.
ಏರಿ ನೀರುಂಬಡೆ, ಬೇಲಿ ಕೆಯ್ಯ ಮೇವಡೆ,
ನಾರಿ ತನ್ನ ಮನೆಯಲ್ಲಿ ಕಳುವಡೆ,
ತಾಯ ಮೊಲೆವಾಲು ನಂಜಾಗಿ ಕೊಲುವಡೆ,
ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ!

ವಚನ ಸಂಖ್ಯೆ-೨೬

ಈ ವಚನವನ್ನು ೨೦ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಜೀವನದಲ್ಲಿ ಕಷ್ಟಗಳು ಎದುರಾಗುವುದು ಸಹಜ. ಅವು ಒಂದು ಪರಿಮಿತಿಯಲ್ಲಿದ್ದರೆ ಸಾಧಕ ಅವುಗಳನ್ನು ಎದುರಿಸಬಲ್ಲ. ತನ್ನನ್ನು ಕಾಯುವ ಶಕ್ತಿಯ ಆಶ್ರಯವನ್ನು ಪಡೆದು ಅವುಗಳನ್ನು ಗೆಲ್ಲಬಲ್ಲ. ಆದರೆ ಆ ಕಾಯುವ ಶಕ್ತಿಯೇ ಮುನಿದು ಮಾರಕವಾಗುವುದಾದರೆ ಇನ್ನು ರಕ್ಷಣೆಗಾಗಿ ಯಾರ ಮೊರೆ ಹೋಗಬೇಕು? ಅದನ್ನು ಸ್ಪಷ್ಟಪಡಿಸುವುದಕ್ಕೆ ಕೆಲವು ಸಾದೃಶ್ಯಗಳನ್ನು ಕೊಡುತ್ತಾರೆ.

ಧರೆ ಹತ್ತಿ ಉರಿಯುವದು, ಕೆರೆಯ ಏರಿ ತನ್ನಲ್ಲಿರುವ ನೀರು ಕುಡಿಯುವುದು, ಹೊಲದ ಬೇಲಿಯೇ ಎದ್ದು ಬೆಳೆಯನ್ನು ಮೇಯುವುದು, ಗೃಹಿಣಿಯೇ ತನ್ನ ಮನೆಯಲ್ಲಿ ಕಳ್ಳತನ ಮಾಡುವುದು ಮತ್ತು ತಾಯಿಯ ಮೊಲೆ ಹಾಲು ವಿಷವಾಗಿ ಪರಿವರ್ತಿತವಾಗಿ ಮಗುವನ್ನು ಕೊಲುವುದು –ಇವೆಲ್ಲವನ್ನು ಯಾರಿಗೆ ದೂರಲಿ ಎಂಬ ಅಸಹಾಯಕ ಆರ್ತವಾಣಿಯನ್ನು ನಾವಿಲ್ಲಿ ಕಾಣಬಹುದು.

ಹೆಚ್ಚು ಅನುವಾದಕರು ವಚನವನ್ನು ಅರ್ಥ ಮಾಡಿಕೊಂಡು ಅನುವಾದಿಸುವುದಕ್ಕಿಂತ ಹೆಚ್ಚಾಗಿ ತಮಗೆ ತಿಳಿದದ್ದನ್ನು ನಿರೂಪಿಸಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ, ಹಳಕಟ್ಟಿಯವರು When the fire is buning on the hearth, There is standing room left; but if thewhole earth catches fire, one can find no-standing–room ಎನ್ನುವುದು ಕನ್ನಡ ವಾಕ್ಯದ ಜಾಯಮಾನವೆಂದು ಭಾಸವಾಗುತ್ತಿದೆ, ಮಾಸ್ತಿಯವರ If the oven burns-one-may stand it. If the earth burns may one stand? ಇಂಗ್ಲಿಷ್‌ನಂತೆ ಅನಿಸುವುದಿಲ್ಲ.

ಬಸವನಾಳ–ಅಯ್ಯಂಗಾರರ The fire enkindled in the hearth may be extinguished with the earth:Should the earth itself be ablaze, what charm can quench its rage away? ಎಂಬ ಅನುವಾದ ಇರುವುದನ್ನು ನೇರವಾಗಿ ಹೇಳುವುದಕ್ಕಿಂತ ಅದರ ಹಿಂದಿನಭಾವದ ವಿವರಣೆ ಕೊಡಲು ಹೋಗಿ ಎಡವುತ್ತದೆ. should thus the Preserver himself Destroyer turn, Where lies the anchor of my hope, ಎನ್ನುವುದು ಇಲ್ಲಿ ಸಮಂಜಸ ಎನಿಸುವುದಿಲ್ಲ.

ಯಗಟಿಯವರ Fire in the hearth can be extinguished.Can one quench the burning earth when it is ablaze? ಉರಿಯುತ್ತಿರುವ ಒಲೆಯನ್ನು ಆರಿಸುವ ಪ್ರಕ್ರಿಯೆ ಕಂಡು ಬರುತ್ತದೆ. ಪಿ.ಶಾಮರಾವ್‌ರ One can stand the flames that dart from the oven;; But one cannot stand if the earth is all afire. ಅನುವಾದದಲ್ಲಿ ಸ್ವಲ್ಪ ಸಮೀಪಕ್ಕೆ ಬಂದರೂ, if the gash begins to water, or if the creeper eats up the hand that trails it, ಅನ್ನುವುದು ವಚನದ ಆಶಯದಿಂದ ಬಹಳ ದೂರ ಸಾಗುತ್ತದೆ.

ಮೆನೆಜಿಸ್–ಅಂಗಡಿಯವರ ಅನುವಾದದಲ್ಲಿ ಮೊದಲಿನ ಕೆಲವು ಸಾಲುಗಳ ಅನುವಾದ ಚನ್ನಾಗಿ ಮೂಡಿ ಬಂದಿವೆಯಾದರೂ ಕೊನೆಯಲ್ಲಿ And all seems part of a crazy dream- ಸಾಲು ಪ್ರಸ್ತುತವೆನಿಸುವುದಿಲ್ಲ. ಅಂತೆಯೇ ಸಿ.ಎನ್.ಹಿರೇಮಠರ ಅನುವಾದದಲ್ಲೂ ಕೊನೆಯಲ್ಲಿ ಬರುವ When Thou hast given me birth and filled me With misery of this life and this birth

Who would free me from it? ಎನ್ನುವುದು ಅನಾವಶ್ಯಕವೆನಿಸುತ್ತದೆ. ಪಿ.ಉಮಾಶಂಕರರ ಅನುವಾದದಲ್ಲಿ hearth which has red hot cinders but not on the scorching earth for it will make you jump ಮತ್ತು cow grazes on the green pastures but the fence you have put makes a bold bid to limit its space-by this you have made your cow yield less milk. ಎನ್ನುವುದು ಅಸಮಂಜಸ ಎನಿಸುತ್ತದೆ. ಆಕಳು ಹುಲ್ಲು ತಿನ್ನಲು ಹೋಗುವುದು,ಬೇಲಿ ಅದಕ್ಕೆ ಪ್ರತಿಸ್ಪರ್ಧಿಯಾಗುವುದು,ಮನೆಯಲ್ಲಿ ಮಡದಿ ಕರುವಿಗೆ ಬಿಡದೆ ಆಕಳ ಹಾಲು ಕದಿಯುವುದು, ಮೂಕ ಪ್ರಾಣಿಯಾದ ಆಕಳು ಯಾರಿಗೆ ಮೊರೆ ಇಡಬೇಕೆನ್ನುವ ಎನ್ನುವ ವಿಚಾರವು ವಚನದ ಆಶಯದಿಂದ ಬಹು ದೂರ ಹೋದಂತಾಗುತ್ತದೆ.

ವೆಲೆಬಿಲ್ ಅವರು ಮೆನೆಜಿಸ್-ಅಂಗಡಿಯವರ ಅನುವಾದವನ್ನು ತಥಾವತ್ತಾಗಿ ಭಟ್ಟಿ ಇಳಿಸಿದ್ದಾರೆ. ಅವರು ಮಾಡಿದ ತಪ್ಪನ್ನೇ ಇವರೂ ಮಾಡುತ್ತಾರೆ...ಕೆರೆಯ ಏರಿಯು ನೀರನ್ನು ಕುಡಿಯುತ್ತದೆಯೇ? ಕಾಯಬೇಕಾದ ಏರಿ ತನ್ನಲ್ಲಿರುವ ನೀರು ತಾನೇ ಕುಡಿದರೆ ಹೇಗೆ ಎನ್ನುವ ಭಾವ ಬರುವುದೇ ಇಲ್ಲ.

ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರ ಅನುವಾದದ ಮೊದಲಿನ ಹತ್ತು ಸಾಲುಗಳು ಸಮರ್ಪಕವೆನಿಸಿದರೆ, ಕೊನೆಗೆ ಬರುವ Lord, you are mother and father unto me; you are my protector; you are my saviour? If you are to abandon me then it is a travesty of Godhood! of your kindness! ನಾಲ್ಕು ಸಾಲುಗಳು ಅಪ್ರಸ್ತುತವೆನಿಸುತ್ತವೆ.

ರೊವೆನೆ ಹಿಲ್ ಮತ್ತು ಪ್ರಭುಶಂಕರ ಅವರ ಅನುವಾದ ಕೂಡ ಮೊದಲಿಗೆ ಸಮರ್ಪಕವೆನಿಸಿದರೂ ಕೊನೆಗೆ ಬರುವ If You get angry can I bear It ?Tell me, Lord !ಎನ್ನುವುದು ಪ್ರಸ್ತುತವೆನಿಸುವುದಿಲ್ಲ. ಡಿ.ಎ.ಶಂಕರ ಅವರ ಅನುವಾದದಲ್ಲಿ ಏರಿ ಎಂದರೆ ಕೆರೆ, bund,tank, dyke ಆಗದೇ stream ಆಗಿರುವುದು ಸಮಂಜಸವೆನಿಸುವುದಿಲ್ಲ.

ಬಾಗಿ, ಪ್ರಧಾನ ಗುರುದತ್ತ ಮತ್ತು ದಿಸ್ಸೆನ್‌ನಲ್ಲಿ ವಿಜಯಾ ಗುತ್ತಲ ಅವರ ಅನುವಾದಗಳು ವಚನದ ಆಶಯವನ್ನು ಇಂಗ್ಲಿಷನಲ್ಲಿ ತರಲು ಯಶಸ್ಸು ಕಾಣುತ್ತವೆ.

One can with stand the fire that burns in the hearth,
not the fire that sets the world ablaze,
When the dam absorbswater, When the fence grazes the
crop, When the housewife steals in the household,
When mother's milk poisons the child,
To whom shall I tell my tale of woes,
Oh Kudala Sangama

C.S.Bagi (15)

One could stand if the hearth burns;
How can anybody stand if the earth itself
catches fire and burns with raging flames?

Whom to complain if the bund itself
Sucks all the water, and the fence itself
Devours what all is grown in the field,
And the housewife herself steals in the house,
And the mother's milk itself turns poisonous? Tell me O
Lord Kudalasangamadeva !

Pradhan Gurudatta (6)

೧೧. ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ,
ಎನ್ನ ಬಿಡು, ತನ್ನ ಬಿಡು ಎಂಬುದು ಕಾಯವಿಕಾರ,
ಎನ್ನ ಬಿಡು, ತನ್ನ ಬಿಡು, ಎಂಬುದು ಮನೋವಿಕಾರ.
ಕರಣೇಂದ್ರಿಯಗಳೆಂಬ ಸೊಣಗ ಮುಟ್ಟದ ಮುನ್ನ
ಮನ ನಿಮ್ಮನೈದುಗೆ, ಕೂಡಲಸಂಗಮದೇವಾ.

ವಚನ ಸಂಖ್ಯೆ-೩೬

ಈ ವಚನವನ್ನು ೧೧ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಮನಸ್ಸು ಕರಣೇಂದ್ರಿಯಗಳಲ್ಲಿ ಸಿಕ್ಕು ಬಿದ್ದು, ನಾನಾತೆರವಾದ ಯಾತನೆಗಳನ್ನು ಅನುಭವಿಸುವ ಮೊದಲು ದೇವರತ್ತ ತಿರುಗಬೇಕೆಂದು ಬಸವಣ್ಣನವರು ಆಶಿಸಿದ್ದಾರೆ. ಒಂದು ಮೊಲವನ್ನು ಬೇಟೆ ನಾಯಿಗಳು ಅಟ್ಟಿಸಿಕೊಂಡು ಹೋಗಿ ಬೇಟೆಯನಾಡುವಂತೆ, ಕಾಯ ವಿಕಾರ ಮತ್ತು ಮನೋವಿಕಾರಗಳು ಮನುಷ್ಯನನ್ನು ಬೇಟೆಯಾಡುತ್ತವೆ. ಈ ವಿಕಾರಗಳಿಗೆ ಒಳಗಾಗದಿದ್ದರೆ ಮಾತ್ರ ಸಾಧಕನು ತನ್ನನ್ನು ತಾನು ರಕ್ಷಿಸಿಕೊಳ್ಳಬಹುದು. ಇವುಗಳಿಂದ ಸರಿದು ಮನಸ್ಸನ್ನು ಶಿವನತ್ತ ತಿರುಗಿಸಿದರೆ ಎಲ್ಲ ವಿಕಾರಗಳಿಂದಲೂ ನಾವು ಬಿಡುಗಡೆ ಹೊಂದಬಹುದಾಗಿದೆ ಎಂಬುದು ಈ ವಚನದ ಸಂದೇಶ.

ವಚನ ಮೇಲ್ನೋಟಕ್ಕೆ ಸರಳ ಎನಿಸಿದರೂ ಅನುವಾದಕನಿಗೆ ಒಂದು ಜಟಿಲ ಆಹ್ವಾನವೇ ಆಗಿದೆ. ಇಲ್ಲಿ ಕಾಯವಿಕಾರ ಮತ್ತು ಮನೋವಿಕಾರ ಶಬ್ದಪುಂಜಗಳು ಬಹಳಷ್ಟು ಅನುವಾದಕರನ್ನು ಅಟ್ಟಿಸಿ ಕಾಡಿವೆ. ಅವುಗಳಲ್ಲಿ ಅರ್ಥ Passion ಎಂದಾಗಬೇಕು. Desire ಅದಕ್ಕೆ ಹತ್ತಿರದ ಸಮಾನಾರ್ಥ ಪದ. ಇವುಗಳನ್ನು ಬಿಟ್ಟು ಬೇರಿನ್ನಾವ ಪದಗಳನ್ನು ಬಳಸಿದರೂ ಅರ್ಥಕ್ಕೆ ಚ್ಯುತಿ ಬರುತ್ತದೆ.

ಅದನ್ನು ಬಾಗಿthe body itches, mind hankers, ಎಂದು ಅನುವಾದಿಸಿದರೆ ರಾಮಾನುಜನ-body's lusts, lusts of mind, ಶಿವಪ್ರಕಾಶ-body's deformation,mind's deformation, ಡಿ.ಎ.ಶಂಕರ-body's deformity, Mind's deformity ಎಂದು ಅನುವಾದಿಸುತ್ತಾರೆ. ದಸ್ಯೆನ್‌ನಲ್ಲಿ bodily Passion cry , passions of mind snarl. ಎಂದು ಅನುವಾದಿಸುತ್ತಾರೆ. ಮೆನೆಜಿಸ್-ಅಂಗಡಿಯವರು let me ಎಂದು ಹೇಳಿ ಕ್ರಿಯಾಪದವನ್ನು ಬಿಟ್ಟು ಬಿಡುತ್ತಾರೆ. let me ಪದ ತನ್ನಷ್ಟಕ್ಕೇ ತಾನೇ ನಿಲ್ಲಲಾರದು. ಇನ್ನೂ ರಾಮಾನುಜನ let go ಎನ್ನುತ್ತಾರೆ. ಇಲ್ಲಿ object ಕಾಣೆಯಾಗುತ್ತದೆ ದಸ್ಯೆನ್, ರಾಮಾನುಜನರ ಅಂಥ ಅನುಕರಣೆಯಾಗಿರುತ್ತದೆ. ಮೂಲವಚನದ ಆಶಯಕ್ಕೆ ಸಮೀಪ ಬರುವಹಾಗೆ

ಮಾಸ್ತಿ, ಬಸವನಾಳ, ಬಾಗಿ, ಮೆನೆಜಿಸ್ ಅನುವಾದಿಸಿದರೂ ಹೆಚ್ಚಿನ ಅನುವಾದಕರು ಮೂಲವಚನದ ಆಶಯವನ್ನು ಗ್ರಹಿಸುವಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಎಡವುತ್ತಾರೆ.

ಹೀಗಾಗಿ ಇಲ್ಲಿ ಮಾಸ್ತಿ ಯವರ ಅನುವಾದವೇ ಗದ್ಯದಲ್ಲಿದ್ದರೂ ವಚನದ ಮೂಲ ಆಶಯವನ್ನು ತರಲು ಸಫಲವಾಗುತ್ತದೆ.

As if nine hounds were unleashed after one hare the
desires of the body ask: "Let me go, let me go."
The desires of the mind ask: "Let me go. Let me go"
Before the faculties and desires get me as the hound the hare,
let my mind reach you God Koodala Sangama.

Masti (19)

೧೨. ಕಲ್ಲ ನಾಗರ ಕಂಡಡೆ ಹಾಲನೆರೆಯೆಂಬರು,
ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯಾ.
ಉಂಬ ಜಂಗಮ ಬಂದಡೆ ನಡೆಯೆಂಬರು,
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ.
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ,
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ.

ವಚನ ಸಂಖ್ಯೆ –೧೯೪

ಈ ವಚನವನ್ನು ೧೯ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಶರಣರ ಮಾರ್ಗವನ್ನು ಎಂದಿಗೂ ಉದಾಸೀನ ಮಾಡದೆ ನಿಷ್ಠೆ, ನಂಬುಗೆಗಳಿಂದ ಅದರಲ್ಲಿ ಹೆಜ್ಜೆ ಹಾಕಬೇಕೆಂದು ಈ ವಚನ ತಿಳಿಸುತ್ತದೆ. ಈ ಸಂದೇಶವನ್ನು ಬಸವಣ್ಣನವರು ವಿಡಂಬನೆಯ ಮೂಲಕ ವಿಸ್ತರಿಸುತ್ತಾರೆ. ಕಲ್ಲಿನ ನಾಗಪ್ರತಿಮೆಗಳಿಗೆ ಹಾಲನ್ನು ಎರೆಯುವ, ಆರಾಧಿಸುವ ಜನರು ಜೀವಂತವಾದ ಹಾವು ಕಂಡರೆ ಕೊಂದುಹಾಕಿ ಬಿಡುತ್ತಾರೆ. ಅದರಂತೆ ದೇವರಿಗೆ ನೈವೇದ್ಯ ಹಿಡಿಯುವ ಭಕ್ತರು ಜೀವಂತ ಜಂಗಮಕ್ಕೆ ಏನನ್ನೂ ಕೊಡದೆ ಹೊರಹಾಕುತ್ತಾರೆ. ಈ ವೈರುಧ್ಯದಿಂದ ಭಕ್ತಿ ಕೇವಲ ತೋರಿಕೆಯಾಗಿ ಬಿಡುತ್ತದೆ. ಶರಣರಿಗೆ ಉದಾಸೀನ ಮಾಡಿದರೆ ಕಲ್ಲು ತಾಗಿದ ಮಣ್ಣಹೆಂಟೆಯ ಹಾಗೆ ಭಕ್ತಿ ವ್ಯರ್ಥವಾಗುತ್ತದೆ. ಜಂಗಮವೇ ಉಂಬ ಲಿಂಗ ಎಂದು ತಿಳಿದು ಅದರಂತೆ ನಡೆಯಬೇಕೆಂದು ಬಸವಣ್ಣನವರ ವಿಚಾರವಿದೆ.

ಈ ವಚನವನ್ನು ಮೂರು ಭಾಗವಾಗಿ ವಿಂಗಡಿಸಬಹುದು.

೧ ಕಲ್ಲ ನಾಗರ ಕಂಡಡೆ ಹಾಲನೆರೆಯೆಂಬರು,

೨ ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯಾ

೩ ಉಂಬ ಜಂಗಮ ಬಂದಡೆ ನಡೆಯೆಂಬರು,

ಅದರಂತೆ ಮೊದಲನೇಯ ಭಾಗದಲ್ಲಿ ಮಾಸ್ತಿ, ಶಿವಪ್ರಕಾಶಮಠ, ಡಿ.ಎ.ಶಂಕರ, ವಚನದ ಆಶಯಕ್ಕೆ ಸಮೀಪ ಬರುತ್ತಾರೆ. ಎರಡನೇಯ ಭಾಗದಲ್ಲಿ ಯಗಟಿ, ಪಿ.ಶ್ಯಾಮರಾವ, ಶಿವಪ್ರಕಾಶ, ಡಿ.ಎ.ಶಂಕರ ಇವರು ವಚನದ ಈ ಭಾಗದ ಕನ್ನಡೀಕರಣ ಆಶಯಕ್ಕೆ ಸಮೀಪ ಬರುತ್ತಾರೆ. ಮೂರನೇಯ ಭಾಗವನ್ನು ಸಂಗನಾಳ ಮಠ ಮತ್ತು ಬಸವನಾಳ/ಅಯ್ಯಾಂಗಾರವರು ಅನುವಾದಿಸುವ ಗೋಜಿಗೆ ಹೋಗುವುದಿಲ್ಲ. ಅನುವಾದದಲ್ಲಿ ಕಷ್ಟಕರವಾದುದನ್ನು ಬಿಟ್ಟು ಬಿಡುವುದು ಇವರೀರ್ವರಿಗೆ ಸರ್ವೇ ಸಾಮಾನ್ಯವಾಗಿದೆ. ಮಾಸ್ತಿಯವರಲ್ಲೂ ಈ expression ಹೊಂದುವುದೇ ಇಲ್ಲ. ಪಿ.ಶಾಮರಾವ್ ಮಣ್ಣು ಹೆಂಟೆ ಬದಲು ಕಲ್ಲಿನ ಗುಡ್ಡೆಯನ್ನಾಗಿ ಮಾಡುತ್ತಾರೆ. ಕಲ್ಲಿನಿಂದ ಹೊಡೆದ ಹುಳಗಳು ಎನ್ನುವ ಅರ್ಥ ಬರುವಂತೆ ಅನುವಾದಿಸುತ್ತಾರೆ. ಸಿ.ಎನ್.ಹಿರೇಮಠರವರು ಕಲ್ಲಿನಿಂದ ಹೊಡೆದ ಹುಳಗಳು (ಮಿಡತೆ) ಎನ್ನುವ ಅರ್ಥ ಬರುವಂತೆ ಅನುವಾದಿಸಿ ಅದರ ಅರ್ಥ ಗ್ರಹಿಸುವಲ್ಲಿ ವಿಫಲರಾಗಿದ್ದಾರೆ. ಮತ್ತು ಆ ಅರ್ಥದಿಂದ ಬಹು ದೂರ ಹೋಗುತ್ತಾರೆ. ಯಗಟಿರವರು ಅದರ ಅರ್ಥಗ್ರಹಿಸುವಲ್ಲಿ ವಿಫಲರಾಗಿದ್ದಾರೆ. ಉಷಾಪಾಲಾಕ್ಷಪ್ಪ ಮತ್ತು ಆರ್ಯಆಚಾರ್ಯ ಆ ಅರ್ಥದಿಂದ ಬಹುದೂರ ಹೋಗುತ್ತಾರೆ. ಅದರ ಸರಿ ಅರ್ಥ ಗ್ರಹಿಸುವಲ್ಲಿ ಮೆನೆಜಿಸ್/ಅಂಗಡಿ, ಶಿವಪ್ರಕಾಶ–ನಾಗಭೂಷಣ, ಅನಂತನಾರಾಯಣ, ರೊವೆನೆ ಹಿಲ್/ಪ್ರಭುಶಂಕರ, ವಿರುಪಾಕ್ಷಪ್ಪ, ಅವರ ಅನುವಾದಗಳು ಓದುಗನಿಗೆ ವಚನದ ಆಶಯವನ್ನು ಮುಟ್ಟಿಸುವಲ್ಲಿ ಯಶಸ್ಸು ಕಾಣುತ್ತವೆ. ಅವುಗಳಲ್ಲಿ ಕೆಳಗಿನ ವಚನಗಳನ್ನು ಉದಾಹರಿಸಬಹುದು.

When they see a stone snake
pour milk they say
when they see a living snake
kill it they say
to the jangama who eats
go away they say
to the linga that eats not
make offering they say
if they ignore
the sharanas of our Koodalasangama
they will be like
the clod of earth hit by stone

The Sign (30)

Seeing a snake of stone, they say:
'Pour milk, do!'
seeing a real snake, they say:
'Kill it!'
If a Jangama who can eat arrives,
They say:' Away!'
And serve their dainties to a Linga

That cannot eat!
If you make little of
Our Kudala Sanga's Saranas,
You will be as a clod
Knocking against a stone

Menezes/Angadi (194)

೧೩. ಕರಿ ಘನ: ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ
ಗಿರಿ ಘನ: ವಜ್ರ ಕಿರಿದೆನ್ನಬಹುದೆ? ಬಾರದಯ್ಯಾ.
ತಮಂಧ ಘನ: ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯಾ.
ಮರಹು ಘನ: ನಿಮ್ಮ ನೆನೆವ ಮನ ಕಿರಿದೆನ್ನಬಹುದೆ ? ಬಾರದಯ್ಯಾ
ಕೂಡಲಸಂಗಮದೇವಾ.

ವಚನ ಸಂಖ್ಯೆ-೬

ಈ ವಚನವನ್ನು ೧೭ ಜನ ಅನುವಾದಕರು ಇಂಗ್ಲಿಷ್‌ಗೆ ಭಾಷಾತರಿಸಿದ್ದಾರೆ. ಆನೆ-ಅಂಕುಶ, ಪರ್ವತ-ವಜ್ರ, ಕತ್ತಲೆ-ದೀಪದ ಬೆಳಕು, ಮರಹು-ನೆನಹು ಹೀಗೆ ನಾಲ್ಕು ವೈರುಧ್ಯಗಳ ಜೋಡಿಯನ್ನು ಕೊಟ್ಟು, ಸಾದೃಶ್ಯಗಳಿಂದ ನಮ್ಮ ಮನಸ್ಸಿನ ಶಕ್ತಿಯನ್ನು ಮನದಟ್ಟು ಮಾಡಿಕೊಡುವ ಈ ವಚನ ಅತ್ಯಂತ ಸರಳವಾಗಿದ್ದರೂ ನಿರೂಪಣಾಕೌಶಲ್ಯದಿಂದ ಬಹಳಷ್ಟು ಪರಿಣಾಮಕಾರಿಯಾಗಿ ಮೂಡಿಬಂದಿದೆ. ಒಂದೊಂದು ವಾಕ್ಯದಲ್ಲಿಯೂ ಮೂರು ಒಳ ವಾಕ್ಯಗಳಿವೆ. ಮೊದಲನೆಯದು ವಸ್ತುವಿನ ಘನತೆಯನ್ನು ಎರಡನೆಯದು ಆ ಘನತೆಗೆ ಸವಾಲಾಗಿರುವುದನ್ನು ಮೂರನೆಯದು ಅದಕ್ಕೆ ಉತ್ತರವನ್ನು ನೀಡುತ್ತವೆ. ಈ ರೀತಿ ಪ್ರಶ್ನೋತ್ತರ, ಭಾವ ಇಂಗ್ಲಿಷ್‌ನಲ್ಲಿ ವ್ಯಕ್ತ ಮಾಡುವುದು ಸ್ವಲ್ಪ ಕಷ್ಟಕರವಾದದ್ದು.

ಅಂಕುಶ, ವಜ್ರ, ದೀಪದ ಬೆಳಕು ಇವು ಕಣ್ಣಿಗೆ ಸಣ್ಣವಾಗಿ ಕಂಡರೂ ಅವುಗಳಲ್ಲಿ ಹೇಗೆ ಶಕ್ತಿ ಇದೆಯೋ ಹಾಗೆ ಮನಸ್ಸಿನಲ್ಲಿ ಶಕ್ತಿ ಇದೆ. ಇಲ್ಲಿ ಘನ ಮತ್ತು ಕಿರಿದು ಎನ್ನುವ ಎರಡು ಪದಪ್ರಯೋಗಗಳು ಅನುವಾದಕಾರರು ಬೇರೆ ಬೇರೆ ಶಬ್ದಗಳನ್ನು ಉಪಯೋಗಿಸುವಂತೆ ಮಾಡಿವೆ. ಕರಿ, ಗಿರಿ, ತಮಂಧ ಮತ್ತು ಮರೆವುಗಳೆಂಬ ಘನವೆಂಬುದಕ್ಕೆ ಇಂಗ್ಲಿಷ್‌ನಲ್ಲಿ great, rend, thick, massive , big, huge, dense, unlimited, awful, powerful, immense, vast, gross, spacious, prodigal, heavy, strong, mighty, deep, large, giant ಎಂದು ಅನುವಾದಕರು ಬೇರೆ ಬೇರೆಯಾಗಿ ಬಳಸಿದ್ದಾರೆ. ಅಂಕುಶ, ವಜ್ರ, ಜ್ಯೋತಿ ಮತ್ತು ದೇವನನ್ನು ನೆನೆವ ಮನಗಳೆಂಬ ಕಿರಿಗಳನ್ನು ಇಂಗ್ಲಿಷ್‌ನಲ್ಲಿ tiny, small, wee, dim, limited, nothing, mean, poor, less strong, less mighty, slender, weak ಎಂದು ಅನುವಾದಕರು ಪದಪ್ರಯೋಗ ಮಾಡಿದ್ದಾರೆ.

ಹೆಚ್ಚು ಜನ ಅನುವಾದಕರು ವಜ್ರಕ್ಕೆ diamond ಪದ ಬಳಸಿದ್ದಾರೆ. ಇಲ್ಲಿ ವಜ್ರ ಎನ್ನುವುದುಕ್ಕೆ ಸಿಡಿಲು ಎಂಬ ಅರ್ಥದಂತೆ thunderbolt ಎಂದು ಬಳಸಬೇಕಿತ್ತು. ಅಂಕುಶವನ್ನು goad ಎಂದು ಬರೀ ಮೂವರು ಮಾತ್ರ ಬಳಸುತ್ತಾರೆ. ಅಂಕುಶ ಎಂದಿಗೂ hook ಆಗಲಾರದು. ಮೇಲ್ನೋಟಕ್ಕೆ ಅನುವಾದಗಳು

ಹೆಚ್ಚು ಕಡಿಮೆ ಒಂದೇ ರೀತಿಯಾಗಿ ಕಂಡರೂ ಬಸವನಾಳ ಅಯ್ಯಂಗಾರ, ಬಾಗಿ ಮತ್ತು ಪಿ.ಶಾಮರಾವ್, ಪಿ.ಬಿ.ದೇಸಾಯಿ ಅವರು ಮೂಲ ವಚನದ ಭಾವ ತರಲು ಯಶಸ್ಸು ಕಾಣುತ್ತಾರೆ.

Mighty is the elephant;  But could you say
Less mighty the goad?Nay, not so!
Mighty is the mountain but could you say
Less mighty is the thunder bolt?Nay, not so!
Mighty is the darkness ; But could you say
Less mighty is the light?Nay,not so!
Mighty is the oblivion ; but could you say
Less mighty is the mind?Nay, not so!
O God of Kudala Sangama!

P.B.Desai (6)

೧೪. ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯ ಬಡಬೇಡ,
ತನ್ನ ಬಣ್ಣಿಸಬೇಡ ,ಇದಿರ ಹಳಿಯಲುಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ.
ಇದೇ ನಮ್ಮ ಕೂಡಲಸಂಗಮನೊಲಿಸುವ ಪರಿ.

ವಚನ ಸಂಖ್ಯೆ.–೨೩೫

ಈ ವಚನವನ್ನು ೨೩ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಅಂತರಂಗ ಬಹಿರಂಗ ಶುದ್ಧಿಗಳನ್ನು ಸಾಧಿಸುವ ಸುವರ್ಣ ಮಾರ್ಗವೊಂದನ್ನು ಬಸವಣ್ಣನವರು ಇಲ್ಲಿ ತೋರಿದ್ದಾರೆ. ಮನುಷ್ಯನ ಕಾಯದೋಷಗಳಾದ ಸಿಟ್ಟು, ಅಸಹ್ಯ ಮಾಡುವಿಕೆ , ತನ್ನ ಬಣ್ಣನೆ, ಪರರ ನಿಂದನೆಗಳಿಂದ ದೂರವಾಗಬೇಕಾದ ಅನಿವಾರ್ಯತೆಯನ್ನು ಸಾಧಕ ಗುರುತಿಸಬೇಕು. ಇವು ಒಂದೊಂದು ಆತನನ್ನು ನಾಶಪಡಿಸಬಲ್ಲವು. ಇವುಗಳನ್ನು ಬಿಟ್ಟು ಉದಾತ್ತನಾಗುವುದೆಂದರೆ ಅಂತರಂಗ ಮತ್ತು ಬಹಿರಂಗ ಶುದ್ಧಿಗಳನ್ನು ಹೊಂದುವುದೇ ಆಗಿದೆ. ಆ ಸಪ್ತ ಅವಗುಣಗಳಿಂದ ದೂರವಾಗಿ ಶುದ್ಧಿಯನ್ನು ಗಳಿಸಿಕೊಂಡರೆ ಅಂತಹ ಭಕ್ತನನ್ನು ದೇವರು ಕೂಡ ಮೆಚ್ಚಿಕೊಳ್ಳುತ್ತಾನೆ. ಇದು ದೇವರನ್ನು ಕಾಣುವ ಮಾರ್ಗವೇ ಆಗಿದೆ.

ಈ ಸರಳ ವಚನವನ್ನು ಕೆಲವರು ಸಂಕ್ಷಿಪ್ತಗೊಳಿಸಲು ಯತ್ನಿಸಿದ್ದಾರೆ. ಹಳಕಟ್ಟಿಯವರ ಅನುವಾದ ಚೆನ್ನಾಗಿದ್ದರೂ 'ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ' ಸಾಲುಗಳು ಬಿಟ್ಟು ಹೋಗಿವೆ. ಕೆ.ಈಶ್ವರನ್ ವಿರುಪಾಕ್ಷಪ್ಪ, ಚೆನ್ನಾಗಿ ಅನುವಾದಿಸಲು ಯತ್ನಿಸಿದವರಲ್ಲಿ ಪ್ರಮುಖರು. ಸಪ್ತಸೂತ್ರಗಳನ್ನು ಅನುವಾದಿಸುವುದು ಅಂತಹ ಜಟಿವಾಲದದ್ದೇನಲ್ಲ. ಕೊನೆಯಲ್ಲಿ ವಚನದ ಆಶಯವನ್ನು ಗ್ರಹಿಸಬೇಕಿದ್ದ ಇದೇ ಅಂತರಂಗ ಶುದ್ದಿ ಇದೇ ಬಹಿರಂಗ ಶುದ್ದಿಯನ್ನು ಹೆಚ್ಚು ಜನ ವಿದ್ವಾಂಸರು ಅನುವಾದಿಸುವಲ್ಲಿ ವಿಫಲರಾಗುತ್ತಾರೆ.

ಶುದ್ಧಿ Purely ಎಂದಾಗ ಬೇಕು. ಅದಕ್ಕೆ ಪರ್ಯಾಯವಾಗಿ cleanliness, purification, cleansing ಮುಂತಾದ ಪದಗಳನ್ನು ಕೆಲವರು ಬಳಸಿದ್ದಾರೆ. ಮೆನೆಜಿಸ್/ಅಂಗಡಿ ಮತ್ತು ಜಿ.ಎಸ್.ಆಮೂರ, ದಿ ಸೈನ್ ಇವುಗಳು ವಚನದ ಮೂಲ ಆಶಯವನ್ನು ಓದುಗನಿಗೆ ತರುವಲ್ಲಿ ಸಫಲವಾಗುತ್ತವೆ.

Do not Steal.
Do not kill.
Do not lie.
Do not lose your temper.
Do not hate other people.
Do not praise yourself.
Do not blame the enemy.
This is purity inner and outer.
This is the way to please
God Kudala Sangama.

G.S.Amur (11)

೧೫ ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ.

ವಚನ ಸಂಖ್ಯೆ-೪೩೮

ಈ ವಚನವನ್ನು ೧೯ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಬಸವಣ್ಣನವರು ಕೌಟುಂಬಿಕ ಮತ್ತು ಸಾಮಾಜಿಕ ಜೀವನಕ್ಕೆ ಒತ್ತು ಕೊಟ್ಟು, ಅವುಗಳ ಉದಾತ್ತೀಕರಣಕ್ಕೆ ಯತ್ನಿಸಿದ್ದಾರೆ. ಮನುಷ್ಯ ತನ್ನಲ್ಲಿ ಇರುವುದನ್ನು ತನ್ನ ಸುತ್ತಲಿನವರ ಜೊತೆಗೆ ಹಂಚಿಕೊಂಡು ತಿನ್ನುವುದು ಒಳ್ಳೆಯ ಮಾರ್ಗ. ಕಾಗೆ ಕೋಳಿಗಳು ಕೂಡ ತಮ್ಮ ಆಹಾರವನ್ನು ಹಂಚಿಕೊಂಡು ತಿನ್ನುತ್ತವೆ. ಶಿವಭಕ್ತನಾದವನು ದಾಸೋಹ ಮಾಡುವುದೂ ಭಕ್ತಿ ಪಕ್ಷವಾಗಿದೆ ಎಂದು ಬಸವಣ್ಣನವರು ಹೇಳುತ್ತಾರೆ. ಹಂಚಿ ತಿನ್ನುವುದು ಒಂದು ದೊಡ್ಡ ಮಾನವೀಯ ಗುಣ ಎಂದು ಅವರು ಇಲ್ಲಿ ಪ್ರತಿಪಾದಿಸಿದ್ದಾರೆ. ಈ ವಚನದಲ್ಲಿ ಕೋಳಿ ಪದವನ್ನು ಕೆಲವರು Cock, hen, fowl, ಎಂದು ಅನುವಾದಿಸುತ್ತಾರೆ. ಆದರೆ hen ಎನ್ನುವುದೇ ಸೂಕ್ತವೆನಿಸುತ್ತದೆ. ಅಗುಳ ಎನ್ನುವುದನ್ನು morsel, grain of food, grain of boiled rice, particle of food, crumb, grain, speck of food, grain of rice, grain of corn, ಆದರೆ a grain of food ಎನ್ನುವುದು ಇಲ್ಲಿ ಸೂಕ್ತವೆನಿಸುತ್ತದೆ. ಬಳಗ ಎನ್ನುವುದಕ್ಕೆ ಬಳಸಲಾದ kindred, relatives, kin, host, kith and kin, flock, fellow crows, ಗಳಲ್ಲಿ ಸಮಸ್ತ ಸಮುದಾಯವನ್ನು ಸೂಚಿಸಬೇಕಾದರೆ kindred ಪದ ಸೂಕ್ತವೆನಿಸುತ್ತದೆ.

ಕುಟುಕ ಎನ್ನುವುದಕ್ಕೆ corn to peck, peck a bit of food a few grains of corn, stray morsel ಎಂದು ಹೆಚ್ಚು ಅನುವಾದಕರು ಬಳಸಿದ್ದಾರೆ. ಆದರೆ ಅದು 'ಕುಟುಕ' ಅರ್ಥದ ಸೂಕ್ಷ್ಮತೆಯನ್ನು ಕೊಡುವುದಿಲ್ಲ. ಇಲ್ಲಿ ಈ ಅಪ್ಪಟ ಕನ್ನಡ ಪದಕ್ಕೆ ಸಮಾನವಾಗಿ ಇಂಗ್ಲಿಷ್‌ನಲ್ಲಿ ಕೊಡುವುದು ಕಠಿಣವೆನಿಸುತ್ತದೆ. ಕೋಳಿಯ ಆಹಾರವು ಕಾಳು ಇಲ್ಲವೇ ಹುಳ ಆಗಿರುವುದರಿಂದ peck ಎಂದು ಅನುವಾದಿಸಿದ್ದರೆ ಹೆಚ್ಚು ಸೂಕ್ತ ಎನಿಸುತ್ತಿತ್ತು.

ಕುಲ ಎನ್ನುವ ಪದಕ್ಕೆ family, tribe, kith and kin, clan, brood ಎಂದು ಉಪಯೋಗಿಸಿದುದು ಕಾಣುತ್ತದೆ. ಆದರೆ ಇಲ್ಲಿ ಹೆಚ್ಚು ಸೂಕ್ತವಾಗುವುದು brood ಎಂಬ ಪದ. ಹೆಚ್ಚು ಸರಳವಿರುವ, ಹೀಗೆ ವಿವಿಧ ಶಬ್ದಗಳನ್ನು ಆವ್ಹಾನಿಸುತ್ತದೆ. clan ಜನಸಮೂಹಕ್ಕೆ, kith and kin ಸಮೀಪದ ಸಂಬಂಧಿಗಳಿಗೆ ಹೊಂದುವುದರಿಂದ ಇಲ್ಲಿ ಕೋಳಿಯ ಗುಂಪಿಗೆ brood ಎನ್ನುವುದೇ ಸೂಕ್ತಪದ.

ಕೊನೆಯ ಭಾಗವನ್ನು ಹೆಚ್ಚು ಕಡಿಮೆ ಎಲ್ಲರೂ ಸರಿಯಾಗಿಯೇ ಗ್ರಹಿಸುತ್ತಾರೆ. ಅಲ್ಲಿ ಹೆಚ್ಚು ಗೊಂದಲಕ್ಕೆ ಅಸ್ಪದವಿಲ್ಲ. ಒಟ್ಟಾರೆ ಇಡೀ ವಚನವನ್ನು ನೋಡಲಾಗಿ, Sangmesha ಎನ್ನುವ ಅಂಕಿತದ ಸಮಸ್ಯೆಯೊಂದನ್ನು ಬಿಟ್ಟರೆ ಉಳಿದ ಸಂಗನಾಳಮಠರ ಅನುವಾದ ಚನ್ನಾಗಿಯೇ ಮೂಡಿಬಂದಿದೆ. ಒಟ್ಟಿನಲ್ಲಿ ಬೊಂದಾಡೆಯವರು ವಚನದ ಮೂಲ ಆಶಯವನ್ನು ಕೊಡುವುದರಲ್ಲಿ ಸಫಲರಾಗಿರುತ್ತಾರೆ.

> Does not a crow invite its kind if it sees a particle of food?
> Does not a fowl invite its tribe when it finds a morsel of
> food? Is not a so-called servant of God Shiva having no
> love for other devotees, inferior to a crow or hen, O Lord
> Kudala Sangama?
>
> Bondade (3)

೧೬. ಕೊಲುವನೇ ಮಾದಿಗ,
ಹೊಲಸು ತಿಂಬವನೇ ಹೊಲೆಯ.
ಕುಲವೇನೊ ಆವದಿರ ಕುಲವೇನೊ ?
ಸಕಲಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗನ ಶರಣರೆ ಕುಲಜರು.

ವಚನ ಸಂಖ್ಯೆ–೫೯೧

ಈ ವಚನವನ್ನು ೨೧ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಕುಲ ಜಾತಿ ಮತ ಪಂಥ ಗಳಿರುವ ಸಮಾಜದಲ್ಲಿ ವೈಷಮ್ಯ ಕಾರಣವಾಗಿ ಮೇಲು, ಕೀಳು ಬೆಳೆದು ಬಂದು, ಅನಾಹುತ ಪರಂಪರೆಯನ್ನು ಸೃಷ್ಟಿಸಿವೆ. ಹೊಲೆಯ ಮಾದಿಗರು ಕನಿಷ್ಠರು ಎಂಬ ಭಾವವನ್ನು ಬಸವಣ್ಣನವರು ಪ್ರಶ್ನಿಸಿ, ಯಾರು ಅಲ್ಲದ ಕೆಲಸವನ್ನು ಮಾಡುತ್ತಾರೆಯೋ ಅವರು ಅಂತ್ಯಜರು ಎಂದು ಕರೆಯುತ್ತಾರೆ. ಸಕಲಜೀವಿಗಳಿಗೆ ಲೇಸನ್ನು ಬಯಸುವವರು ಮಾತ್ರ ಅತ್ಯಂತ ಶ್ರೇಷ್ಠ ಕುಲದವರು. ಜಾತಿ ಮತಗಳು ಹುಟ್ಟಿನಿಂದ ಬಾರದೆ ಮಾಡುವ

ಕೆಲಸ, ವರ್ತನೆ, ಗುಣ ಅವಗುಣಗಳಿಂದ ಬರುವಂತಾಗಬೇಕು ಎನ್ನುವುದು ಇಲ್ಲಿಯ ಆಶಯ. ಸಮಾಜವು ಕೀಳು ಜನ ಎಂದು ಕರೆಯುತ್ತಿದ್ದವರನ್ನು ಗುಣವನ್ನು ಗಮನಿಸಿ ಬಸವಣ್ಣನವರು ಇಲ್ಲಿ ಅವರಿಗೆ ಕುಲಜರು ಎಂದು ಶಿವಭಕ್ತರು ಎಂದು ಅಗ್ರಪಟ್ಟ ನೀಡಿದ್ದಾರೆ. ಮೇಲು ಕೀಳುಗಳ ಭಾವನೆಯನ್ನು, ಗ್ರಹಿಕೆಯನ್ನು ಈ ವಚನ ಬುಡಮೇಲು ಮಾಡುತ್ತದೆ.

ಜಾತಿ ಜನನದಿಂದ ಬಂದಿರದೇ, ಕಾಯಕದಿಂದ ಬಂದುದಾಗಿದ್ದು ಕೊಲುವವನೇ ಮಾದಿಗ, ಹೊಲಸು ತಿಂಬುವವ ಹೊಲೆಯ ಅರ್ಥಾತ ಹಿಂಸೆ ಮಾಡುವವ, ಹೊಲಸು ಪದಾರ್ಥವನ್ನು ತಿನ್ನುವವ ಹೊಲೆಮಾದಿಗ ಎಂಬುದು ಈ ವಚನದ ತಾತ್ಪರ್ಯ. 'ಕಾಸಿ ಕಮ್ಮಾರನಾದ' ವಚನದ ಆಶಯವನ್ನೇ ಇದು ಮುಂದುವರೆಸುತ್ತದೆ. ಕುಲಜರು ಯಾರೆಂದರೆ ಸಕಲ ಜೀವಗಳಿಗೆ ಲೇಸನ್ನೇ ಬಯಸುವವರು. ಅಂಥವರು ಕೂಡಲ ಸಂಗಮನ ಶರಣರು. ಮಾದಿಗ ಹೊಲೆಯ ಪದಗಳು ಇಂಗ್ಲಿಷ್‌ನಲ್ಲಿ ಇಲ್ಲ. pariah ಎನ್ನುವ ಪದ ಎರಡನ್ನೂ ಸೂಚಿಸುತ್ತದೆ. ಅರ್ಥಾತ್ ಕೀಳು ಕುಲದವನೆಂದು ಅರ್ಥ.

ಅನುವಾದಕರಲ್ಲಿ ಕೆಲವರು holeya , madiga ಈ ಕನ್ನಡ ಪದಗಳನ್ನು ಇಂಗ್ಲಿಷ್‌ನಲ್ಲಿ ಬಳಸಿದ್ದಾರೆ. ಇನ್ನೂ ಕೆಲವರು out caste, untouchable, low caste, low born, low caste born ಮುಂತಾದ ಪದಗಳನ್ನು ಬಳಸಿ, ಹೊಲೆಯ ಮಾದಿಗ ಪದಗಳ ಅರ್ಥ ಕೊಡುವ ಯತ್ನ ಮಾಡಿದ್ದಾರೆ.

ಇಲ್ಲಿ ಕುಲಜ ಪದ high born, well born, best born ಎಂದು ಅನುವಾದಿತವಾಗಿರುತ್ತದೆ. ಇಂಥಲ್ಲಿ ಮೂಲ ಪದಗಳನ್ನು ಇಡುವುದೇ ಹೆಚ್ಚು ಸೂಕ್ತ. ಹೀಗೆ ಮಾಡಿದರೆ ಅನುವಾದಕನ ಡೊಂಬರಾಟವನ್ನು ತಪ್ಪುತ್ತದೆ.

ವಚನದ ಮೂಲ ಆಶಯವನ್ನು ಮಾಸ್ತಿ, ಮೆನೆಜೆಸ್-ಅಂಗಡಿ, ಸಿ.ಎನ್.ಹಿರೇಮಠ, ವಿರುಪಾಕ್ಷಪ್ಪ, ಸಿ.ಆರ್.ಯರವಿನತೆಲಿಮಠ ಸಮೀಪಿಸುತ್ತಾರೆ. ವಚನದ ಆಶಯದಿಂದ ಸಂಗನಾಳಮಠ, ಬಾಗಿ, ಯಗಟಿ, ಪಿ.ಶಾಮರಾವ್, ಹಕಾರಿ/ಥಿಯೋಡೋರ, ಪಿ.ಬಿ.ದೇಸಾಯಿ, ಮಾತೆ ಮಹಾದೇವಿ, ಕೆ.ಈಶ್ವರನ್, ಬೊಂದಾಡೆ, ಡಿ.ಎ.ಶಂಕರ, ದ ಸ್ಪೈನ್, ಆರ್ಯ ಆಚಾರ್ಯ ವೆಂಕಟರೆಡ್ಡಿ ದೇಸಾಯಿ ಬಹುದೂರ ಹೋಗುತ್ತಾರೆ.

ಕೆಲವು ಪದಗಳನ್ನು ಅನುವಾದದಲ್ಲಿ ಉಪಯೋಗಿಸುವಾಗ ಅನುವಾದಕನಿಗೆ ಸ್ವಲ್ಪ ಸ್ವಾತಂತ್ರ್ಯ ಕೊಡುತಬೇಕಾಗುತ್ತದೆ. ಇಲ್ಲಿ ಕೆಲವು ವಿಚಾರಗಳನ್ನು/ಶಬ್ದಗಳನ್ನು ಮಾಡುವುದು ಸಾಧ್ಯವಾಗುವುದಿಲ್ಲ ಇಲ್ಲಿ ಇದ್ದುದರಲ್ಲಿ ಉತ್ತಮ ಅನುವಾದ ಸಿ.ಆರ್.ಯರವಿತೆಲಿಮಠ ಅವರದು.

He alone is a Madiga who kills animals;
He alone is a Holeya who eats filth.
What worth is the caste of those well-born
Who sacrifice an animal and eat it ?
Our Kudala Sanga's devotees,
Who wish all the living well,
Alone are well born.

C.R.Yaravinatelimth (30)

೧೭ ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ,
ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು,
ಇನ್ನೆಂದಿಂಗೆ ಮೋಕ್ಷವಹುದೋ ಕೂಡಲಸಂಗಮದೇವಾ?

ವಚನ ಸಂಖ್ಯೆ-೯

ಈ ವಚನವನ್ನು ಎಂಟು ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸುತ್ತಾರೆ. ಇಲ್ಲಿ ನಾಲ್ಕು ಮುಖ್ಯ ಅಂಶಗಳು ನಮ್ಮೆದುರಿಗೆ ಗೋಚರಿಸುತ್ತವೆ. ೧. ಚಂದ್ರನಂತೆ ಕಳೆ ಪ್ರಾಪ್ತವಾದದ್ದು. ೨. ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿದುದು.೩. ಅದರಿಂದ ದೇಹಕ್ಕೆ ಗ್ರಹಣ ಹಿಡಿದದ್ದು ಮತ್ತು ಕೊನೆಯದಾಗಿ ಇನ್ನೆಂದಿಗೆ ಇದರಿಂದ ಮೋಕ್ಷವಹುದು. ಈ ನಾಲ್ಕು ವಿಚಾರಗಳು ಇಂಗ್ಲಿಷ್‌ನಲ್ಲಿ ಸಮರ್ಪಕವಾಗಿ ಅನುವಾದಗೊಂಡಿವೆಯೇ ಎಂಬುದನ್ನು ಗಮನಿಸಬೇಕಾಗುತ್ತದೆ, ಬಸವಣ್ಣನವರು ತಮ್ಮನ್ನೇ ಚಂದ್ರನಿಗೆ ಹೋಲಿಸಿಕೊಂಡು ಅಳಲನ್ನು ತೋಡಿಕೊಳ್ಳುತ್ತಾರೆ. ನಮಗೆ ಊಹಿಸಲಾಗದ ಯಾವುದೋ ವಿಪರೀತ ಪರಿಸ್ಥಿತಿಯೊಂದು ಅವರಿಗೆ ಇದಿರಾಗಿ ಮುತ್ತಿ ಮಂಕುಗೊಳಿಸಿ ಅವರನ್ನು ತೀರ ನಿಸ್ಸಹಾಯಕರನ್ನಾಗಿ ಮಾಡಿರಬೇಕು ಎನ್ನುವ ಹಿನ್ನೆಲೆಯಲ್ಲಿ ಗಮನಿಸಿದಾಗ ಬಸವನಾಳ-ಅಯ್ಯಂಗಾರ ಅವರ ಅನುವಾದದಲ್ಲಿ ವಚನದ ಆಶಯ ಮರೆಯಾಗುತ್ತದೆ. By painful degrees the light of knowledge grows- and I seem to apprehend ಎನ್ನುವ ಸಾಲು ಅನವಶ್ಯವೇನೋ ಅನಿಸುತ್ತದೆ. My little knowledge is now betrayed- will never illumined be by divine grace; it's derailed, destroyed by the potent earth crust that hath me in thrall! ಸಮರ್ಪಕ ಅರ್ಥ ಕೊಡುವುದಿಲ್ಲ.

ಮೆನೆಜಿಸ್-ಅಂಗಡಿಯವರ ಅನುವಾದದಲ್ಲಿ ಎಲ್ಲ ನಾಲ್ಕೂ ಅಂಶಗಳು ಸ್ಪಷ್ಟವಾಗಿ ಮೂಡಿ ಬರುವುದಿಲ್ಲ. ಮಾತೆ ಮಹಾದೇವಿಯವರ ಅನುವಾದ ಇಡಿಯಾಗಿಯೇ ಮೂಲಕ್ಕೆ ಹೊಂದಿಕೊಳ್ಳುವುದಿಲ್ಲ. The shadow of worldly life ಎಂದರೆ ರಾಹು ಎಂದು ತಿಳಿದುಕೊಳ್ಳುವುದೇ? ಚಂದ್ರನು ರಾಹುವಿನ ಹಿಡಿತದಿಂದ ಕಳೆಗುಂದುವಂತೆ ನಾನು ಕಳೆಗುಂದಿದ್ದೇನೆ ಎನ್ನುವ ಬಸವಣ್ಣನವರ ವಿಚಾರವೇ ಇಲ್ಲಿ ಮೂಡುವುದಿಲ್ಲ. ಈ ಹಿನ್ನೆಲೆ ತಿಳಿಯದ ಓದುಗನಿಗೆ ಇದು ಹೇಗೆ ಅರ್ಥವಾಗುತ್ತದೆ.

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ ಎನ್ನುವುದನ್ನು ಹಳಕಟ್ಟಿ I appear in the splendour of a full moon, ಬಸವನಾಳ-ಅಯ್ಯಂಗಾರ Slowly like the phasesof the moon, ಯಗಟಿ My position is similar to the digit of the moon, ಬಾಗಿ Like the moon I was under the spell of phases, ಮೆನೆಜಿಸ್-ಅಂಗಡಿ My lot is as the moon's-Shadowy spot, ರಾಮಾನುಜನ್ I added day by day a digit of light like the moon, ಶ್ರೀ ಸಿದ್ಧೇಶ್ವರ ಸ್ವಾಮೀಜಿ, Those were the days of my full moon life: Whatever I saw was beautiful, ಮಾತೆ ಮಹಾದೇವಿ, Full moon brightness covered me. ಎಂದು ಅನುವಾದಿಸಿದ್ದಾರೆ. ಈ ಒಂದೇ ವಿಚಾರವನ್ನು

ವ್ಯಕ್ತಪಡಿಸುವಲ್ಲಿ ಹಳಕಟ್ಟಿ, ಬಾಗಿ, ರಾಮಾನುಜನ್ ಮೂಲಕ್ಕೆ ಸಮೀಪಿಸುತ್ತಾರೆ. ಅಂತೆಯೇ ಈ ಮೂವರು ವಚನದ ಪೂರ್ಣ ಆಶಯವನ್ನು ಇಂಗ್ಲಿಷ್‌ಗೆ ತರುವಲ್ಲಿ ಸ್ವಲ್ಪ ಯಶಸ್ಸು ಕಾಣುತ್ತಾರೆ.

I added day by day
a digit of light
like the moon.
The python-world,
omnivorous Rahu,
devoured me.
Today my body
is in eclipse.
when is the release,
O Lord of the meeting rivers?

Ramanujan(9)

೧೮. ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ,
ಅಂಬುಜಕೆ ಭಾನುವಿನ ಉದಯದ ಚಿಂತೆ.
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ.
ಎನಗೆ ನಮ್ಮ ಕೂಡಲಸಂಗನ ಶರಣರ ನೆನೆವುದೆ ಚಿಂತೆ.

ವಚನ ಸಂಖ್ಯೆ–೩೭೫

ಈ ವಚನವನ್ನು ೧೯ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಭಕ್ತಿಯಲಿ ಆತುರತೆ ಮತ್ತು ತೀವ್ರತೆಗಳು ಹೆಚ್ಚಿದಷ್ಟೂ ಭಕ್ತ ಮತ್ತು ದೇವನ ಸಂಬಂಧ ಘನಿಷ್ಠವಾಗುತ್ತದೆ. ಚಕೋರ ಪಕ್ಷಿಗೆ ಚಂದ್ರನ ಉಗಮದ ಚಿಂತೆಯಂತೆ, ಕಮಲಕ್ಕೆ ಸೂರ್ಯನ ಉದಯದ ಚಿಂತೆಯಂತೆ ಭಕ್ತನಿಗೆ ಶರಣರನ್ನು, ನೆನೆವ ಚಿಂತೆ ತುಂಬಿಕೊಂಡಿರಬೇಕು. ಅದರಲ್ಲಿಯೂ ಶರಣರನ್ನು ನೆನೆಯುವುದೆಂದರೆ ಭ್ರಮರವು ಪರಿಮಳವನ್ನು ಚನ್ನಾಗಿ ಸವಿದಂತೆಯೇ ಸರಿ. ಸದಾಕಾಲ ಶರಣರ ನೆನಪು ತಮ್ಮ ಮನವನ್ನು ತುಂಬಿಕೊಂಡಿರಲಿ ಎಂದು ಬಸವಣ್ಣನವರು ಬಯಸುವಲ್ಲಿ ಭಕ್ತಿಯ ಲಕ್ಷಣವೂ ಬಿತ್ತರಗೊಂಡಿದೆ.

ಈ ವಚನದಲ್ಲಿ ಪುನರಾವರ್ತಿತ 'ಚಿಂತೆ' ಪದ ಅನುವಾದಕನನ್ನು ಚಿಂತೆಗೀಡು ಮಾಡುತ್ತದೆ. ಈ ಪದಕ್ಕೆ ಸಮಾನಾರ್ಥ ಇಂಗ್ಲಿಷ್‌ನಲ್ಲಿ worry ಎಂದು ಆಗುತ್ತದೆ. ಆದರೆ ಆ ಅರ್ಥದಲ್ಲಿ ಅದನ್ನು ಇಲ್ಲಿ ಬಳಸ ಕೂಡದು. yearning, longing, wait anxiously, pine ಇವು ಸಮೀಪದ ಸಮಾನಾರ್ಥಗಳು wait anxiously longing for ಇಲ್ಲವೇ yearning for ಆ ಶಬ್ದದ ಆಶಯವನ್ನು ಕೊಡಬಲ್ಲವು. ಈ

ವಚನದ ಆಶಯದಿಂದ ಆರ್ಯಆಚಾರ್ಯ, ಉಷಾ ಪಾಲಾಕ್ಷಪ್ಪ ವೆಂಕಟರೆಡ್ಡಿ ದೇಸಾಯಿ, ಸಂಗನಾಳ ಮಠ, ಹಕಾರಿ/ಥಿಯೋಡೋರ್, ಪಿ.ಶಾಮರಾವ್, ಬಹುದೂರ ಹೋಗುತ್ತಾರೆ. ಮೆನೆಜಿಸ್–ಅಂಗಡಿ, ಯಗಟಿ, ಸಿ.ಎನ್.ಹಿರೇಮಠ, ರೋವೆನಾಹಿಲ್–ಪ್ರಭುಶಂಕರ, ಶಿವಪ್ರಕಾಶ/ನಾಗಭೂಷಣ, ಡಿ.ಎ.ಶಂಕರ ಮತ್ತು ದ ಸೈನ್ ಇವರು ತಮ್ಮ ಅನುವಾದಗಳಲ್ಲಿ ಮೂಲಕ್ಕೆ ಸಮೀಪ ಬರುತ್ತಾರೆ.

The Chakora-bird waits anxiously for the moon;
The lotus waits anxiously for the sun;
The bee waits anxiously
to suck the nectar of flowers;
I wait anxiously to remember
The devotees of our Kudala Sangamadeva.

D.A.Shankar (61)

೧೯ ಛಲಬೇಕು ಶರಣಂಗೆ ಪರಧನವನೊಲ್ಲೆಂಬ,
ಛಲಬೇಕು ಶರಣಂಗೆ ಪರಸತಿಯನೊಲ್ಲೆಂಬ.
ಛಲಬೇಕು ಶರಣಂಗೆ ಪರದೈವವನೊಲ್ಲೆಂಬ
ಛಲಬೇಕು ಶರಣಂಗೆ ಲಿಂಗಜಂಗಮವನೊಂದೆಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ,
ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ.

ವಚನ ಸಂಖ್ಯೆ–೬೭೭

ಈ ವಚನವನ್ನು ೧೩ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಶರಣನಾದವನಿಗೆ ಭಕ್ತಿ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಛಲಗಾರಿಕೆ. ತನ್ನ ಸಾಧನೆಯ ಬದುಕಿಗೆ ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ನಿರಾಕರಿಸಬೇಕು ಎನ್ನುವುದು ಅವನಿಗೆ ಖಚಿತವಾಗಿ ಗೊತ್ತಿರಬೇಕು. ಪರಧನ, ಪರಸತಿ, ಪರದೈವಗಳ ಆಮಿಷಗಳಿಗೆ ಬಲಿ ಆಗುವವನು ಎಂದಿಗೂ ಶರಣನಾಗಲಾರ. ಇವುಗಳನ್ನು ಒಲ್ಲೆ ಎಂದು ಹೇಳುವ ಛಲ ಮೈಗೂಡಿಸಿಕೊಂಡು ಲಿಂಗತತ್ವದಲ್ಲಿ ನಿಷ್ಠೆಯಿಂದ ನಡೆಯುವವನು ಶರಣನೆನಿಸಿಕೊಳ್ಳುತ್ತಾನೆ. ಎಲ್ಲಕ್ಕೂ ಮಿಗಿಲಾಗಿ ಲಿಂಗ ಮತ್ತು ಜಂಗಮ ತತ್ವಗಳು ಭಿನ್ನವಾಗಿರದೆ ಅವೆರಡು ಒಂದೇ ಎಂಬುದನ್ನು ಛಲದಿಂದ ಸಾಧಿಸಬೇಕು. ಈ ಬಗೆಯ ಛಲವಿಲ್ಲದಿದ್ದರೆ ದೇವರು ಅವರಿಗೆ ಒಲಿಯುವುದಿಲ್ಲವೆಂದು ಬಸವಣ್ಣನವರು ಹೇಳುತ್ತಾರೆ. ಈ ವಚನದ ಆಧಾರ ಪದ (key word) ಛಲಬೇಕು ಎನ್ನುವುದು. ಛಲ ಇಲ್ಲಿ obstinacy, firmness, strong will, stead fast will, detemination, resolution, firm will ಎಂಬುದಾಗಿ ಅನುವಾದಿತವಾಗಿದೆ. 'ಛಲ' ಪದವನ್ನು ಇಂಗ್ಲಿಷ್‌ನಲ್ಲಿ ಅರ್ಥಪೂರ್ಣವಾಗಿ ಅನುವಾದಿಸುವುದು ಕಷ್ಟದ ಕೆಲಸ. ಆದ್ದರಿಂದ ಈ ವಚನದ ಅನುವಾದ

ಸಮಾಧಾನಕರವಿರಲು ಸಾಧ್ಯವೇ ಹೊರತು, ಸಂಪೂರ್ಣ ತೃಪ್ತಿ ಕೊಡಲಾರದು. ಇಲ್ಲಿ ಅನುವಾದಕರು 'ಛಲ' ಪದದ ಅರ್ಥವನ್ನು ಸುತ್ತಿ ಬಳಸಿ ಹೇಳಲು ಮಾತ್ರ ಸಾಧ್ಯವಾಗಿದೆ.

ಅದರಂತೆ ಶರಣ ಎನ್ನುವುದನ್ನು servent, devotee, lord`s man, saint, ಎಂದು ಪ್ರಸಾದ ಎನ್ನುವುದನ್ನು god`s grace, prasada ಎಂದು ಅನುವಾದಿಸಿದರೆ, ಲಿಂಗ ಜಂಗಮವನ್ನು ಎಲ್ಲ ಅನುವಾದಕರು Linga Jangama ಎಂದು ಮೂಲ ಪದವನ್ನೇ ಇಟ್ಟು ಕೊಳ್ಳುತ್ತಾರೆ. ಇಲ್ಲಿ ಪ್ರಸಾದ ಲಿಂಗ ಜಂಗಮಗಳು ಕಾಯಕ, ದಾಸೋಹ, ಶರಣಗಳಂತೆ ಇಂಗ್ಲಿಷ್‌ನಲ್ಲಿಯೂ ಹಾಗೆಯೇ ಕೊಟ್ಟು, ಅಡಿ ವಿವರಣೆ ಕೊಟ್ಟರೆ ಸೂಕ್ತವೆನಿಸುತ್ತದೆ.

ಈ ವಚನವನ್ನು ಸುತ್ತಿ ಬಳಸಿ ಅನುವಾದ ಮಾಡಲು ಯತ್ನಿಸಿದವರಲ್ಲಿ ಹಕಾರಿ/ಥಿಯೋಡೋರ್, ಅನಂತನಾರಾಯಣ, ವೆಲೆಬಿಲ್, ಮೆನೆಜಿಸ್/ಅಂಗಡಿ, ಯಗಟಿ, ಡಿ.ಎ.ಶಂಕರ, ಬಿ.ವಿರುಪಾಕ್ಷಪ್ಪ, ಉಷಾಪಾಲಾಕ್ಷಪ್ಪ, ಆರ್ಯ ಆಚಾರ್ಯ, ಸ್ವಲ್ಪ ಸಮೀಪ ಬರುತ್ತಾರಾದರೂ ದಿ ಸೈನ್, ಕೆ.ಈಶ್ವರನ್ ಮತ್ತು ಶಿವಪ್ರಕಾಶ/ನಾಗಭೂಷಣ ಇಲ್ಲಿ ಸಫಲತೆಯನ್ನು ಕಾಣುತ್ತಾರೆ.

Sarana must have firm will
To say no to other's wealth
Sarana must have firm will
To say no to other man's wife.
Sarana must have firm will
Not to worship other gods.
Sarana should know
That Linga and Jangama are one
Sarana must know Prasada is truth
Kudalasangamadeva will not approve
Those who have no firm will.

Shivaprakash/Nagabhushan(68)

೨೦ ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ ?
ತನಗಾದ ಆಗೇನು ? ಅವರಿಗಾದ ಚೇಗೆಯೇನು ?
ತನುವಿನ ಕೋಪ ತನ್ನ ಹಿರಿಯತನದ ಕೇಡು.
ಮನದ ಕೋಪ ತನ್ನ ಅರಿವಿನ ಕೇಡು.
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲಸಂಗಮದೇವಾ.

ನಂ. ೨೪೯ ವಚನ ಸಂಪುಟ-೧

ಈ ವಚನವನ್ನು ೨೦ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಕೋಪದಿಂದ ಮನುಷ್ಯ ತನ್ನ ಅಧೋಗತಿಗೆ ತಾನೇ ಕಾರಣನಾಗುತ್ತಾನೆ. ಬಸವಣ್ಣನವರು ತನುವಿನ ಕೋಪ, ಮನದ ಕೋಪ ಎಂದು ಎರಡು ಬಗೆಯಾಗಿ ಗುರ್ತಿಸಿ, ಅವುಗಳಿಂದಾಗುವ ಅನಾಹುತಗಳನ್ನು ಎತ್ತಿ ತೋರುತ್ತಾರೆ. ಶರೀರದ ಹಾವಭಾವದಿಂದ ವ್ಯಕ್ತವಾಗುವ ಕೋಪ ವ್ಯಕ್ತಿಯ ಹಿರಿತನವನ್ನು ನಾಶಪಡಿಸುತ್ತದೆ. ಮನಸ್ಸಿನಲ್ಲಿ ಅವ್ಯಕ್ತವಾಗಿರುವ ಕೋಪ ಅರಿವನ್ನು ನಾಶಪಡಿಸುತ್ತದೆ. ಮನೆಯ ಕಿಚ್ಚು ಮನೆಯನ್ನೇ ಸುಡುವಂತೆ ನಮ್ಮ ಕೋಪ ನಮ್ಮನ್ನೇ ಜ್ವಲಿಸಿ ಬಿಡುತ್ತದೆ. ಆದ್ದರಿಂದ ಕೋಪವನ್ನು ಬಿಟ್ಟು ಸಮಾಧಾನದಿಂದಿದ್ದರೆ ಹಿರಿತನವೂ ಬರುತ್ತದೆ, ಅರಿವೂ ಮೂಡುತ್ತದೆ.

ಈ ವಚನವನ್ನು ಮೂರು ಭಾಗಗಳಲ್ಲಿ ವಿಂಗಡಿಸಿ

೧. ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ?
ತನಗಾದ ಆಗೇನು ? ಅವರಿಗಾದ ಚೇಗೆಯೇನು ?

೨. ತನುವಿನ ಕೋಪ ತನ್ನ ಹಿರಿಯತನದ ಕೇಡು.
ಮನದ ಕೋಪ ತನ್ನ ಅರಿವಿನ ಕೇಡು.

೩. ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲಸಂಗಮದೇವಾ.

ವಿಶ್ಲೇಷಿಸಿದಾಗ, ಮೊದಲ ಭಾಗದಲ್ಲಿ ಹಳಕಟ್ಟಿಯವರು, ಹಕಾರಿ, ಅನಂತನಾರಾಯಣ, ಮೆನೆಜಿಸ್-ಅಂಗಡಿ, ಯಗಟಿ, ಡಿ.ಎ.ಶಂಕರ, ಬಿ.ವಿರುಪಾಕ್ಷಪ್ಪ, ಉಷಾಪಾಲಾಕ್ಷಪ್ಪ, ಇವರು ತನಗೆ ಎಂಬುದಕ್ಕೆ ಬಳಸಿದ you ಎಂಬ ಪದ ಸರಿ ಹೊಂದುವುದಿಲ್ಲ. self-oneself ಬಳಸಿದರೆ ಪದಶಃ ಅನುವಾದ ಆಗುತ್ತದೆ. ಮೊದಲ ಭಾಗದ ಅನುವಾದದಲ್ಲಿ ಯಶಸ್ಸು ಕಂಡವರು, ಮೆನೆಜಸ್-ಅಂಗಡಿ, ವಿರುಪಾಕ್ಷಪ್ಪ, ರೊವೆನೆಹಿಲ್/ಪ್ರಭುಶಂಕರ ಮತ್ತು ಡಿ.ಎ.ಶಂಕರ. ಅನುವಾದದಿಂದ ದೂರ ಹೋದವರು ಮಾಸ್ತಿ, ಸಂಗನಾಳಮಠ, ಯಗಟಿ, ಪಿ.ಶಾಮರಾವ್, ಸಿ.ಎಸ್.ಹಿರೇಮಠ, ಅನಂತನಾರಾಯಣ.

ಈ ವಚನದ ಎರಡನೆಯ ಭಾಗದಲ್ಲಿ ತನುವಿನ ಕೋಪ-ಮನದಕೋಪಗಳನ್ನು ಸಮರ್ಥವಾಗಿ ಅನುವಾದಿಸುವಲ್ಲಿ ಹೆಚ್ಚು ಜನ ಯಶಸ್ಸು ಕಾಣುವುದಿಲ್ಲ. ಅವೆರಡೂ ಕೋಪಗಳ ಸೂಕ್ಷ್ಮ ವ್ಯತ್ಯಾಸನ್ನು ತಿಳಿಯದವರೂ ಅದನ್ನು ತಪ್ಪು ಅನುವಾದ ಮಾಡುತ್ತಾರೆ. ತನುವಿನ ಕೋಪ ಪ್ರದರ್ಶಿತನಾಗುವುದಾದರೆ, ಮನದಕೋಪ ಅವ್ಯಕ್ತ. ಅದು ಅವನ ಆಂತರ್ಯದಲ್ಲಿ ಸುಡುತ್ತಿರುತ್ತದೆ. ಇದನ್ನು ಗ್ರಹಿಸುವಲ್ಲಿ ಹಳಕಟ್ಟಿಯವರು ಮೆನೆಜಿಸ್/ಅಂಗಡಿಯವರು, ವಿರುಪಾಕ್ಷಪ್ಪ, ರೊವೆನೆಹಿಲ್/ಪ್ರಭುಶಂಕರ ಮತ್ತು ಡಿ.ಎ.ಶಂಕರ ಸಫಲರಾಗುತ್ತಾರೆ. ಮಾಸ್ತಿ, ಸಂಗನಾಳಮಠ, ಯಗಟಿ, ಪಿ.ಶಾಮರಾವ್, ಸಿ.ಎನ್.ಹಿರೇಮಠ, ಬಾಗಿ, ಅನಂತನಾರಾಯಣ ಸೋಲುತ್ತಾರೆ.

ಒಟ್ಟಾರೆ ಯಶಸ್ವಿ ಅನುವಾದಗಳೆಂದರೆ, ಹಳಕಟ್ಟಿ, ಮೆನೆಜಿಸ್/ಅಂಗಡಿ ವಿರುಪಾಕ್ಷಪ್ಪ, ರೊವೆನೆಹಿಲ್/ಪ್ರಭುಶಂಕರ ಮತ್ತು ಡಿ.ಎ.ಶಂಕರ. ಉದಾಹರಣೆಗಾಗಿ ಹಳಕಟ್ಟಿಯವರ ಅನುವಾದವನ್ನು ಕೊಡಲಾಗಿದೆ.

Why should be angry with those
Who are angry with you ?
What do they gain,or what do you lose ?
Anger in the body causes you loss of dignity.
Anger in the mind causes you loss of knowledge.
Will fire in a house burn the neighbouring house
Without first burning its own house,
O Kudalasangama Deva ?.

Halkatti (39)

೨೧. ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ,
ದಯವೇ ಧರ್ಮದ ಮೂಲವಯ್ಯಾ,
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

ವಚನ ಸಂಖ್ಯೆ-೨೪೭

ಈ ವಚನವನ್ನು ಅನುವಾದಿಸಿದವರು ೨೦ ಜನ ವಿದ್ವಾಂಸರು. ದಯವೇ ಧರ್ಮದ ಮೂಲ ಇದು ಸೂತ್ರ ವಾಕ್ಯ. ಅದು ಇಲ್ಲದಿದ್ದರೆ ಧರ್ಮಕ್ಕೆ ಅಸ್ತಿತ್ವವೇ ಇಲ್ಲ ಎಂಬ ಮಹತ್ವದ ತತ್ವ ಇಲ್ಲಿ ಪ್ರತಿಪಾದಿತಗೊಂಡಿದೆ. ಸಕಲ ಪ್ರಾಣಿಗಳಲ್ಲಿಯೂ ದಯೆ ತೋರುವುದು ನಾವು ಆಚರಿಸುವ ದೊಡ್ಡ ಧರ್ಮವಾಗುತ್ತದೆ. ದಯೆ ಅನುಕಂಪ ತೆಗೆದು ಹಾಕಿದರೆ ಧರ್ಮದಲ್ಲಿ ಏನೂ ಉಳಿಯುವದಿಲ್ಲ. ಧರ್ಮದ ಮೂಲ ಅಸ್ಥಿಭಾರವಾಗಿರುವ ದಯೆ ಇಲ್ಲದಿದ್ದರೆ ದೇವರು ಕೂಡ ಆ ಧರ್ಮವನ್ನು ಒಪ್ಪುವುದಿಲ್ಲ. ಧರ್ಮದ ತತ್ವಗಳು ಸಾವಿರವಿರಬಹುದು. ಆದರೆ ಅವುಗಳಿಗೆಲ್ಲ ತಿಲಕಪ್ರಾಯವೆಂದರೆ ದಯೆ ಎಂದು ಬಸವಣ್ಣನವರು ತಿಳಿಸಿದ್ದಾರೆ.

ಬಸವಣ್ಣನವರ ಹೆಚ್ಚು ಅನುವಾದಿತ ವಚನಗಳಲ್ಲಿ ಇದೂ ಒಂದು. ಇದನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು. ೧. ದಯವಿಲ್ಲದ ಧರ್ಮವದೇವುದಯ್ಯಾ? ೨. ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ ೩. ದಯವೇ ಧರ್ಮದ ಮೂಲವಯ್ಯಾ, ದಯೆ ಎನ್ನುವ ಪದ ಇಲ್ಲಿ key word ಆಗಿ ಓದುಗನ ಗಮನ ಸೆಳೆಯುತ್ತದೆ. ವಿದ್ವಾಂಸರು ಇದನ್ನು mercy, kindness, compassion, love ಎಂದು ಅನುವಾದಿಸುತ್ತಾರೆ. ಯಗಟಿಯವರಲ್ಲಿ consistancy ಇಲ್ಲ. ಹಕಾರಿ/ಥಿಯೋಡೋರ್‌ರದು ಆಡಂಬರದ ಅನುವಾದವಾದರೆ ಪಿ.ಶಾಮರಾವ್ ವಚನವನ್ನು ಮೂರು ಸಾಲುಗಳಲ್ಲಿ ಅರ್ಧಮರ್ಧವಾಗಿ ಅನುವಾದಿಸುತ್ತಾರೆ. ಕೆ.ಈಶ್ವರನ್ ಕೊನೆಯ ಸಾಲಿನಲ್ಲಿ ಎಡವಿದರೆ, ಸಿ.ಎನ್. ಹಿರೇಮಠರವರು Is there a religion without compassion? ಎಂದು ವ್ಯಾಕರಣ ದೋಷ ಮಾಡುತ್ತಾರೆ. ಅದು Is there any religion ಎಂದಾಗಬೇಕು. ಅದು what sort of religion is it, that is sans mercy ಎಂದಾದರೆ ಸರಿ ಹೋಗುತ್ತಿತ್ತು. ಶಿವಪ್ರಕಾಶ ನಾಗಭೂಷಣರವರು all living beings need mercy ಎಂದು ಅನುವಾದಿಸಿರುವುದು ನೋಡಿದರೆ

mercy ಇರಬೇಕಾದದ್ದು ಧರ್ಮದ ಗುಣ, ಜೀವಿಗಳಿಗೆ ಅದು ಬೇಕೊ ಬೇಡವೋ ಗೌಣ. ಡಿ.ಎ.ಶಂಕರರವರ compassion is the root of all religion ಎನ್ನುವುದು compassion is the root of all religions ಇಲ್ಲವೇ compassion is the root of religion ಎಂದಿದ್ದರೆ ಚನ್ನಾಗಿ ಇರುತ್ತದೆ.

ಮಾಸ್ತಿ, ಸಂಗನಾಳಮಠ, ಯಗಟಿ, ಹಕಾರಿ–ಥಿಯೋಡೋರ್, ಪಿ.ಶಾಮರಾವ್, ಸಿ.ಎನ್.ಹಿರೇಮಠ, ಬಾಗಿ, ಅನಂತನಾರಾಯಣ, ಪಿ.ಬಿ.ದೇಸಾಯಿ, ಡಿ.ಎ.ಶಂಕರ, ಕೆ.ಈಶ್ವರನ್, ಪ್ರಧಾನ ಗುರುದತ್ತ್, ಮಾತೆಮಹಾದೇವಿ, ಶಿವಪ್ರಕಾಶ–ನಾಗಭೂಷಣ, ಉಷಾಪಾಲಾಕ್ಷಪ್ಪಾ, ಆರ್ಯಆಚಾರ್ಯ, ವೆಂಕಟರೆಡ್ಡಿ ದೇಸಾಯಿ, ಇವರುಗಳು ಅನುವಾದದ ಒಂದಿಲ್ಲೊಂದು ಘಟ್ಟದಲ್ಲಿ ಸೋಲುತ್ತಾರೆ.

ಹಳಕಟ್ಟಿ, ಮೆನೆಜಿಸ್–ಅಂಗಡಿ, ವಿರುಪಾಕ್ಷಪ್ಪ, ದಿ ಸೈನ್ ಇವರು ವಚನದ ಆಶಯವನ್ನು ಇಂಗ್ಲಿಷನಲ್ಲಿ ತರಲು ಯಶಸ್ಸು ಕಾಣುತ್ತಾರೆ. ಉದಾಹರಣೆಗಾಗಿ ಕೆಳಗಿನ ಅನುವಾದ ಕೊಡಲಾಗಿದೆ.

Lord
is there any religion
without compassion
there must be
compassion for all creatures
compassion is the basis
of religion
anything otherwise
is unacceptable to
Koodalasangamadeva

The Sign (52)

೨೨. ನರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲ ಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯು ಮುಟ್ಟದ ಮುನ್ನ
ಪೂಜಿಸು ಕೂಡಲಸಂಗಮದೇವನ.

ವಚನ ಸಂಖ್ಯೆ–೧೬೧

ಈ ವಚನವನ್ನು ೧೯ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ದೇಹ ಮುಪ್ಪಡರಿ ಮೃತ್ಯುವಶವಾಗುವ ಮುನ್ನವೇ ಪೂಜಿಸಬೇಕೆಂಬುದನ್ನು ಬಹಳ ಪರಿಣಾಮಕಾರಿಯಾಗಿ ಹೇಳಿದ್ದಾರೆ. ಇಲ್ಲಿ ಬರುವ ವೃದ್ಧಾಪ್ಯದ ಚಿತ್ರ ಈ ನಶ್ವರದೇಹದ ಅಸಹಾಯಕ ಸ್ಥಿತಿಯನ್ನು ಕಣ್ಣಮುಂದೆ ಕಟ್ಟುತ್ತದೆ. 'ನರೆ ಕೆನ್ನೆಗೆ

ತೆರೆ ಗಲ್ಲಕೆ' ಎಂದು ಪ್ರಾರಂಭವಾಗಿ ಈ ಚಿತ್ರ ಬೆಳೆಯುತ್ತಾ ಬರುತ್ತದೆ. ಕೆನ್ನೆಯಲ್ಲಿ ನರೆಕೂದಲು, ಸುಕ್ಕುಗಟ್ಟಿ ತೆರೆತೆರೆಯಾದ ಗಲ್ಲ, ಶರೀರವೆಲ್ಲಾ ಬಾಡಿಹೋಗಿ ಗೂಡಿನಂತಾಗಿದೆ. ಹಲ್ಲು ಉದುರಿ ಹೋಗಿವೆ, ಬೆನ್ನು ಬಾಗಿದೆ, ನಿಲ್ಲುವುದಕ್ಕೂ ಇನ್ನೊಬ್ಬರ ನೆರವನ್ನು [ಹಂಗನ್ನು] ಬಯಸುವ ಸ್ಥಿತಿ, ಕಾಲ ಮೇಲೆ ಕೈಯನ್ನೂರಿ ಮೇಲೆದ್ದು ಕೋಲು ಹಿಡಿದೇ ನಿಲ್ಲಬೇಕು. ಹೀಗೆ ಮುಪ್ಪಿನಿಂದ ದೇಹ ಒಪ್ಪಕೆಡುವುದಕ್ಕೆ ಮೊದಲೇ, ಅನಂತರ ಮೃತ್ಯು ಬಂದು ಮುಟ್ಟಿ ಮುರಿದೊಯ್ಯುವುದಕ್ಕೆ ಮುನ್ನವೇ ನಮ್ಮ ಕೂಡಲಸಂಗನನ್ನು ಪೂಜಿಸು ಎನ್ನುತ್ತಾರೆ.

ಇ.ಪಿ.ರೈಸ್ ಅವರಲ್ಲಿ ನರೆ ಕೆನ್ನೆಗೆ, cheek turns wan ಯಗಟಿಯವರಲ್ಲಿ grey hair grow on your head, ಬಾಗಿಯವರಲ್ಲಿ grey hair covers thy face, ಹಕಾರಿ–ಥಿಯೋಡೋರರಲ್ಲಿ silver locks, ಪಿ.ಶಾಮರಾವ cheeks get crimpled, ಎಮ್.ಯಾಮುನಾಚಾರರಲ್ಲಿ temples above thy ear begin to show grey, ಮೆನೆಜಿಸ್–ಅಂಗಡಿರಲ್ಲಿ greyness touch your cheek, ಅನಂತನಾರಾಯಣ grey touch the cheeks, ಸಿ.ಎನ್.ಹಿರೇಮಠರಲ್ಲಿ Grey hair on the face, ಎ.ಕೆ.ರಾಮಾನುಜನ್‌ರಲ್ಲಿ the gray reaches the cheek, ವ್ಹೆಲೆಬಿಲ್‌ರಲ್ಲಿ the greyness touch your cheek, ರೊವೆನೆ ಹಿಲ್ಸ್/ಪ್ರಭುಶಂಕರ ಅವರಲ್ಲಿ– you come to grey cheeks, ಮಾತೆ ಮಹಾದೇವಿರವರಲ್ಲಿ, your cheeks have become grey, ಶಿವಪ್ರಕಾಶರಲ್ಲಿ cheeks come loose ಡಿ.ಎ.ಶಂಕರ The beard goes grey ದಿಸ್ಸೈನ ನಲ್ಲಿ your cheeks grow sallow ಉಷಾ ಪಾಲಾಕ್ಷಪ್ಪರಲ್ಲಿ lines appear on your forehead ಎಂದು ಅನುವಾದಗೊಂಡಿದೆ. ಕೆನ್ನೆ ಎನ್ನುವುದನ್ನು cheek ಎಂದು ಯಮುನಾಚಾರ್ಯ ಹೊರತುಪಡಿಸಿ ಎಲ್ಲ ಅನುವಾದಕರು ತಪ್ಪುತ್ತಾರೆ. ರಾಮನುಜನ್‌ರಂತವರೂ ಈ ಸಾಮಾನ್ಯ ತಪ್ಪನ್ನು ಎಸಗುತ್ತಾರೆ. ಕೆನ್ನೆಯ ಅರ್ಥ temple ಎಂದಾಗಬೇಕು.

ಜಿ.ಎಸ್.ಆಮೂರ the hair on your face turns grey, ಆರ್ಯ ಆಚಾರ್ಯ the wrinkles on cheeks, ಎಂದು ಅನುವಾದಿಸಿದ್ದಾರೆ. ಇಲ್ಲಿ ಕೆನ್ನೆಗೆ cheekಗೆ ಬದಲು temple ಸೂಕ್ತವೆನಿಸುತ್ತದೆ.

ತೆರೆ ಗಲ್ಲಕೆ ಎಂಬುದನ್ನು ಇ.ಪಿ.ರೈಸ್ neck is wrinkled, ಯಗಟಿ wrinkles appear on your cheeks; ಬಾಗ್ಲಿ furrows mark thy cheeks, ಹಕಾರಿ–ಥಿಯೋಡೋರರಲ್ಲಿ and shrunken cheeks, ಪಿ.ಶಾಮರಾವ your chins sag, ಎಮ್.ಯಾಮುನಾಚಾರ jaw sags of senility ಮೆನೆಜಿಸ್–ಅಂಗಡಿ the wrinkles plough your face, ಅನಂತನಾರಾಯಣ the wrinkles touch the chin, ಸಿ.ಎನ್.ಹಿರೇಮಠ cheeks sunk and wrinkled, ಎ.ಕೆ.ರಾಮಾನುಜನ್ The wrinkle the rounded chin, ವ್ಹೆಲೆಬಿಲ್ wrinkles plough your face, ರೊವೆನೆ ಹಿಲ್ಸ್/ಪ್ರಭುಶಂಕರ a wrinkled chin, ಮಾತೆ ಮಹಾದೇವಿ wrinkles plough your face, ಶಿವಪ್ರಕಾಶ before chin is wrinkled, ಡಿ.ಎ.ಶಂಕರ chin becomes wrinkled, ದಿ ಸೈನ್‌ನಲ್ಲಿ chin wrinkled ಜಿ.ಎಸ್.ಆಮೂರ wrinkles Appear on the cheeks, ಆರ್ಯ ಆಚಾರ್ಯ folds on chin, ಎಂದು ಅನುವಾದಿಸಿರುವುದು ನೋಡಿದರೆ ಹೆಚ್ಚು ಕಡಿಮೆ ಯಾವ ಅನುವಾದಕಾರರೂ ವಚನದ ಆಶಯವನ್ನು ಪೂರ್ತಿಯಾಗಿ ಕೊಡಲು ಯಶಸ್ಸು ಕಾಣುವುದಿಲ್ಲ. ಒಂದು ವಿಶೇಷವೆಂದರೆ ಇಲ್ಲಿ ರಾಮಾನುಜನ್ ಕೂಡ

cheek ಮತ್ತು chin ನಡುವಿನ ಅಂತರ ಗುರುತಿಸುವಲ್ಲಿ ಸೋಲುತ್ತಾರೆ. ಒಟ್ಟಾರೆಯಾಗಿ ಯಾರ ಅನುವಾದವೂ ಮೂಲದ ಆಶಯಕ್ಕೆ ಸಮೀಪ ಬರುವುದಿಲ್ಲ. ಇದ್ದುದರಲ್ಲಿಯೇ ಸ್ವಲ್ಪ ಮೂಲಕ್ಕೆ ಒಂದೆರಡು ವಿಚಾರಗಳಲ್ಲಿ ಸಮೀಪಕ್ಕೆ ಬರುವುದು ಎಂ.ಯಮುನಾಚಾರ್ಯರ ಅನುವಾದ :

Ere the temples above thy ear
Begin to show grey
Ere the jaw sags of senility
Ere the teeth fall
Ere the back becomes bent
Ere you become helpless
Ere you need crutches to walk on
Ere your frame becomes wasted
And inclines itself to lie low in death
Come, come to worship the Lord."

M.Yamunachar 967

೨೩. ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲಯ್ಯಾ,
ವೇದಪ್ರಿಯಶಿವನೆಂಬರು, ವೇದಪ್ರಿಯ ಶಿವನಲ್ಲಯ್ಯಾ,
ನಾದವ ನುಡಿಸಿದ ರಾವಳಂಗೆ ಆರೆ ಆಯುಷವಾಯಿತ್ತು.
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು,
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ,
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ

ವಚನ ಸಂಖ್ಯೆ-೧೮೧

ಈ ವಚನವನ್ನು ೧೬ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ಮನುಷ್ಯ ಎಂದಿಗೂ ಕಾಲನ ಕ್ರಿಯೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಒಂದಿಲ್ಲೊಂದು ದಿನ ಮುಪ್ಪನ್ನು ನಾವು ಎದುರಿಸಲೇ ಬೇಕಾಗುತ್ತದೆ. ನಮ್ಮ ತಾರುಣ್ಯ ಉತ್ಸಾಹ, ಲವಲವಿಕೆ ಬತ್ತಿ ಹೋಗುವ ಮೊದಲು ಜಾಗೃತರಾಗಿ ದೇವರನ್ನು ನೆನೆವುದು, ಪೂಜಿಸುವುದು ಒಳಿತು. ಕೂದಲು ನರೆಯ ಗಲ್ಲ ಜೋಲುಬಿದ್ದು, ಬೆನ್ನು ಬಾಗಿ ಹೋಗಿ, ಕೋಲನೂರಿ ನಡೆಯುವ, ಹೊತ್ತು ಬಂದಾಗ ಚಿಂತಿಸಿ ಏನೂ ಫಲವಿಲ್ಲ. ಮುಪ್ಪು ಬಂದು ನಮ್ಮನ್ನು ವಿಕಾರಗೊಳಿಸುವ ಮೊದಲು, ಮೃತ್ಯ ಬಂದು ನಾಶಗೊಳಿಸುವ ಮೊದಲು ಪರಶಿವನನ್ನು ಆರಾಧಿಸಿ, ಪೂಜಿಸಿ, ಒಲಿಸಿಕೊಳ್ಳಬೇಕು. ತಾರುಣ್ಯ ಮತ್ತು ಶಕ್ತಿ ಇದ್ದಾಗಲೇ ದೇವರ ಒಲುಮೆಗೆ ಪಾತ್ರವಾಗುವ ಮುಂದಾಲೋಚನ ಮಾಡಬೇಕೆಂದು ಬಸವಣ್ಣನವರು ಸೂಚಿಸುತ್ತಾರೆ.

ಈ ವಚನವನ್ನು ಇಂಗ್ಲಿಷ್‌ಗೆ ಅನುವಾದಿಸುವಲ್ಲಿ ಮಾಸ್ತಿಯವರು ಅನುವಾದದ ಮಧ್ಯದಲ್ಲಿ I tell you ಎಂದು ಬಳಸಿದರೆ, ಸಂಗನಾಳಮಠರು ಇಡೀ ವಚನದ ಸಾರಾಂಶವನ್ನು ಕೊಡುತ್ತಾರೆ. ಪಿ.ಶಾಮರಾವ್ ವಚನವನ್ನು ಮೂರು ಸಾಲುಗಳಿಗೆ ಸೀಮಿತಗೊಳಿಸಿ ಅದರ ಚುಟುಕು ಸಾರಾಂಶವನ್ನು ನೀಡುತ್ತಾರೆ. ಎಂ.ಯಮುನಾಚಾರ್ಯರು ರಾವಣ ಮತ್ತು ಬ್ರಹ್ಮನಿಗೆ ಆದ ಕಷ್ಟವನ್ನು ಅನುವಾದಿಸುವುದೇ ಇಲ್ಲ. ಹಕಾರಿ/ ಥಿಯೋಡೋರ್ ಅವರು ವಚನದಲ್ಲಿ ಇಲ್ಲದ ವಿಚಾರಗಳನ್ನು ತುಂಬಿ ವಿಸ್ತ್ರತವಾಗಿ ಅನುವಾದಿಸುತ್ತಾರೆ. ಯಗಟಿಯವರು ಅದನ್ನು ಹಿಗ್ಗಿಸಿ ಹೇಳಲು ಪ್ರಯತ್ನಿಸುತ್ತಾರೆ. ಪಿ.ಉಮಾಶಂಕರರ ಅನುವಾದ ಕೆಟ್ಟ ಅನುವಾದಕ್ಕೆ ಮಾದರಿಯಾಗುತ್ತದೆ.

ನಾದಕ್ಕೆ music, sound, nada, ಬಳಸಿದರೆ ಪ್ರಿಯ ಎನ್ನುವುದಕ್ಕೆ fond of, loves, be pleased, love, heed ಎಂದು ಬಳಸುತ್ತಾರೆ. ವೇದಕ್ಕೆ vedas, knowledge, divinefaith, words of scripture ಎಂದು ಬಳಸಿದಾಗ್ಯೂ veda ಎಂದು ಅನುವಾದಿಸಿದವರೆ ಹೆಚ್ಚು. ಮಾಸ್ತಿ, ಸಂಗನಾಳಮಠ, ಯಗಟಿ, ಪಿ.ಶಾಮರಾವ್, ಎಂ.ಯಮುನಾಚಾರ್ಯ, ಸಿ.ಎನ್.ಹಿರೇಮಠ, ಪಿ.ಉಮಾಶಂಕರ, ಅನಂತನಾರಾಯಣ, ಶಿವಪ್ರಕಾಶ/ನಾಗಭೂಷಣಸ್ವಾಮಿ, ವಿರುಪಾಕ್ಷಪ್ಪ, ಡಿ.ಎ.ಶಂಕರ, ದ ಸೈನ್, ಉಷಾ ಫಾಲಾಕ್ಷಪ್ಪ, ವಚನದ ಆಶಯವನ್ನು ಅನುವಾದಿಸುವಲ್ಲಿ ಸೋಲುತ್ತಾರೆ. ಹಳಕಟ್ಟಿಯವರು, ಮೆನೆಜಿಸ್-ಅಂಗಡಿಯವರು ವಚನದ ಪೂರ್ಣ ಆಶಯ ಕಟ್ಟಿಕೊಡುವಲ್ಲಿ ಸಫಲರಾಗುತ್ತಾರೆ.

They say,God is fond of sound
Nay, God is not fond of sound
They say, God is fond of the Vedas.
Nay, God is not fond of Vedas.
The life of Ravana who knew the sound
Was cut short to one half.
The head of Brahma who knew the Vedas
Was cut off.
Hence,He is neither fond of sound,
Nor is He fond of the Vedas,
Our Kudal sangama Deva is fond of faith.

Halakatti (63)

೨೪. ನಾನೊಂದ ನೆನೆದಡೆ ತಾನೊಂದ ನೆನೆವುದು,
ನಾನಿತ್ತಲೆದಡೆ ತಾನತ್ತಲೆಳೆವುದು.
ತಾ ಬೇರೆ ಎನ್ನನಳಲಿಸಿ ಕಾಡಿತ್ತು,
ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು.
ಕೂಡಲಸಂಗನ ಕೂಡಿಹೆನೆಂದಡೆ
ತಾನೆನ್ನ ಮುಂದುಗೆಡಿಸಿತ್ತು ಮಾಯೆ

ವಚನ ಸಂಖ್ಯೆ-೧೪

೧೪ ಜನ ವಿದ್ವಾಂಸರು ಇಂಗ್ಲಿಷಿಗೆ ಅನುವಾದಿಸಿದ ಈ ವಚನದಲ್ಲಿ ಶಿವನತ್ತ ಪಯಣಿಸುವ ಜೀವರು ಮತ್ತು ತನ್ನತ್ತ ಸೆಳೆದು ಅವರನ್ನು ತನ್ನಲ್ಲೇ ಇಲ್ಲವಾಗಿಸುವ ಮಾಯೆ, ಇವರಿಬ್ಬರ ನಡುವಿನ ಸಂಘರ್ಷದ ಚಿತ್ರಣವಿದೆ. ಸಂಸಾರ ವ್ಯಾಮೋಹ ವೈರಾಗ್ಯಗಳಿಗೆ ಮನಸ್ಸೆಂಬ ಮಾಯೆಯೇ ಕಾರಣವೆಂಬುದು ಆ ಮನೋವೈದ್ಯರಿಗೆ ಗೊತ್ತು. ಸಂಸಾರ ನಿರಸನಕ್ಕೆ ಮನೋನಿಗ್ರಹ ಮೊದಲೆಂಬುದನ್ನವರು ಬಲ್ಲರು. ಭಕ್ತನು ದೇವನನ್ನು ಕಾಣಬೇಕೆಂದು ಪರಿತಪಿಸಿದರೂ ಮಾಯೆ ಅದಕ್ಕೆ ಸಾಕಷ್ಟು ಅಡ್ಡಿಯನ್ನು ಉಂಟು ಮಾಡುತ್ತದೆ. ಸಾಧನೆಯ ದಾರಿಯಲ್ಲಿ ಹೆಜ್ಜೆ ಹೆಜ್ಜೆಗೂ ಆಕರ್ಷಣೆಗಳನ್ನು ಚಾಂಚಲ್ಯವನ್ನು ಸಂಶಯ ಸಂದೇಹಗಳನ್ನೂ ಮಾಯೆ ಸೃಷ್ಟಿಸುತ್ತದೆ. ಅವುಗಳನ್ನೆಲ್ಲ ಎದುರಿಸಿ ಸೋಲೋಪ್ಪದೆ ಏಕನಿಷ್ಠೆಯಿಂದ ಮುಂದುವರಿದರೆ ಭಕ್ತನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಆದರೆ ಭಕ್ತನಾದವನು ಈ ಸಂಘರ್ಷವನ್ನು ಎದುರಿಸಿ ಸಾಧನೆಯ ದಾರಿಯಲ್ಲಿ ಮುನ್ನುಗ್ಗುವ ಅನಿವಾರ್ಯತೆಯನ್ನು ಬಸವಣ್ಣನವರು ಇಲ್ಲಿ ತಿಳಿಸಿದ್ದಾರೆ.

ಮಾಯೆ ಎನ್ನುವ ಪದವನ್ನು ಕೆಲವರು ಇದ್ದಕ್ಕಿದ್ದಂತೆ 'Maya' ಎಂದು ಬಳಸಿದರೆ, ಇನ್ನು ಕೆಲವರು egoism, illusion, mind, non-devine force, tempting force, force of the material world ಎಂದು ಪದಪ್ರಯೋಗ ಮಾಡುತ್ತಾರೆ. 'Maya' ಎನ್ನುವ ಪದವನ್ನು ಇರಿಸಿಕೊಂಡು, ಅದೇ ಪುಟದ ಅಡಿಯಲ್ಲಿ ವಿವರಣೆ ಕೊಟ್ಟಿದ್ದರೆ ಚನ್ನಾಗಿರುತ್ತಿತ್ತು. 'Maya' ಎನ್ನುವುದನ್ನು ಕನ್ನಡದಲ್ಲಿ ಸ್ತ್ರೀ ಲಿಂಗವಾಗಿ ಬಳಸಿದಂತೆ ಇಂಗ್ಲಿಷ್‌ನಲ್ಲಿ She ಇಬ್ಬರು ಅನುವಾದಕರು ಬಳಸಿದರೆ, I ಎಂದು ಹನ್ನೊಂದು ಜನ ಅನುವಾದಕರು ಬಳಸುತ್ತಾರೆ. ಮಾಯೆಯನ್ನು It ಎಂದು ಬಳಸಿದರೇ ಚನ್ನಾಗಿರುತ್ತದೆ. 'ನೆನೆದಡೆ' ಎಂಬ ಪದವನ್ನು meditate, intend, propose, deluded, think, thought, remember ಎಂದು ಅನುವಾದಿಸುತ್ತಾರೆ. ಹಳಕಟ್ಟಿಯವರ ಅನುವಾದದಲ್ಲಿ ನಿರೀಕ್ಷಿತ ಪರಿಣಾಮ ಬರುವುದಿಲ್ಲ. ಮಾಸ್ತಿಯವರು ಗದ್ಯದಲ್ಲಿ ವಚನದ ಸಾರವನ್ನು ತರುವ ಉತ್ತಮ ಪ್ರಯತ್ನ ಮಾಡಿದ್ದರೂ ಕೊನೆಗೆ ವಚನಕಾರನ ಅಂಕಿತ ಕೊಡದೆ ಪ್ರಮಾದವೆಸಗುತ್ತಾರೆ. ಬಸವನಾಳ ಅಯ್ಯಂಗಾರ್ ವಚನದಲ್ಲಿಲ್ಲದ ವಿಚಾರಗಳನ್ನು ತಂದು ಉದಾ : I act at last, my half formed desire ಎಂದು ವಚನದ ಆಶಯಕ್ಕೆ ಭಂಗತರುತ್ತಾರೆ. ಯಗಟಿಯವರ ಅನುವಾದ ಪರವಾ ಇಲ್ಲ ಎನಿಸುತ್ತದೆ. ಬಾಗಿಯವರ ಅನುವಾದ The duality of self ಮುಂತಾದ ಪ್ರಯೋಗಗಳಿಂದ ಸೋಲುತ್ತದೆ. ಸಿದ್ದಪ್ಪಾರಾಧ್ಯರ ಅನುವಾದದ ಪ್ರಾರಂಭದಲ್ಲಿ ಎಡವುತ್ತದೆ. ಉದಾ : I am lost in vicious world ಅನಂತನಾರಾಯಣ, ಶ್ರೀಸಿದ್ದೇಶ್ವರ ಸ್ವಾಮೀಜಿ, ಮಾತೆಮಹಾದೇವಿ, ಬಿ.ವಿರುಪಾಕ್ಷಪ್ಪ, ಡಿ.ಎ.ಶಂಕರ, ಉಷಾ ಪಾಲಾಕ್ಷಪ್ಪ, ಅವರು ವಚನದ ಮೂಲ ಆಶಯ ತರುವಲ್ಲಿ ಅರ್ಧಮರ್ಧ ಯಶಸ್ಸುಕಾಣುತ್ತಾರೆ. ಮೂರುಶಿಳ್ಳಿ ಬಸವರಾಜ ಅವರು ಶಬ್ದಶಃ ಅನುವಾದಕ್ಕೆ ಯತ್ನಿಸುತ್ತಾರೆ. ಒಟ್ಟಿನಲ್ಲಿ ಮೆನೆಜಿಸ್-ಅಂಗಡಿಯವರ ಅನುವಾದ ಸಮರ್ಪಕ ಎನಿಸುತ್ತದೆ.

I have a thought, it has another!
This way I pull, it pulls that way!
It grates and freys me, too,
To toil and moil;

And when I long to meet

Lord, Kudala Sangama,

It casts a darkness on my path, This Maya!

Menezes Angadi (14) 1965

೨೫. ನುಡಿದಡೆ ಮುತ್ತಿನ ಹಾರದಂತಿರಬೇಕು.

ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು.

ನುಡಿದಡೆ ಸ್ಫಟಿಕದ ಶಲಾಕೆಯಂತಿರಬೇಕು.

ನುಡಿದಡೆ ಲಿಂಗ ಮೆಚ್ಚಿ ಅಹುದೆನಬೇಕು.

ನುಡಿಯೊಳಗಾಗಿ ನಡೆಯದಿದ್ದಡೆ,

ಕೂಡಲಸಂಗಮದೇವನೆಂತೊಲಿವನಯ್ಯ?

ವಚನ ಸಂಖ್ಯೆ–೮೦೩

ಈ ವಚನವನ್ನು ೨೧ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ಲೌಕಿಕ ಬದುಕಿನಲ್ಲಾಗಲಿ ಭಕ್ತಿಯ ಸಾಧನೆಯಲ್ಲಾಗಲಿ ನಮ್ಮ ನುಡಿಗೆ ತುಂಬ ಮಹತ್ವವಿದೆ. ಮಾತು ಹೇಗೆ ಇರಬೇಕು ಎಂಬುದನ್ನು ಬಸವಣ್ಣನವರು ಇಲ್ಲಿ ಅತ್ಯಂತ ಅರ್ಥಪೂರ್ಣವಾಗಿ ಹೇಳಿದ್ದಾರೆ. ಮಾತು ಮುತ್ತಿನ ಹೊಳಪಿನಂತೆಯೂ, ಮಾಣಿಕ್ಯದ ದೀಪ್ತಿಯಂತೆಯೂ ಇರಬೇಕು. ಅದು ಸ್ಫಟಿಕದಂತೆ ಇನ್ನೂ ಹೆಚ್ಚು ಪಾರದರ್ಶಕವಾಗಿರಬೇಕು. ಹೀಗಾದಾಗ ಅದು ಲಿಂಗಕ್ಕೂ ಮೆಚ್ಚುಗೆ ಆಗುತ್ತದೆ. ನುಡಿ ಮತ್ತು ನಡೆ ಒಂದಾಗಿದ್ದರೆ ಅಲ್ಲಿ ಲಿಂಗದ ಸಮ್ಮತಿಯೂ ಇರುತ್ತದೆ. ಮಾತು ಉದಾತ್ತವಾಗಿ, ನಡತೆಯು ಅದಕ್ಕೆ ಪೂರಕವಾಗಿ ಇರಬಲ್ಲ ಭಕ್ತನಿಗೆ ಪರಶಿವನನ್ನು ಒಲಿಸುವುದು ಕಷ್ಟವೇನಲ್ಲ. ಇದು ಬಸವಣ್ಣನವರ ನುಡಿ ಮೀಮಾಂಸೆಯ ಅದ್ಭುತ ದರ್ಶನವಾಗಿದೆ.

ಈ ವಚನ ಅನುವಾದಕರಿಗೆ ಅಷ್ಟೇನೂ ಕಷ್ಟತಮವೆನಿಸಿರದು. ಯಾಕೆಂದರೆ ಅಲ್ಲಿ ಪ್ರತಿ ಸಾಲು ಸ್ಪಷ್ಟತೆಯಿಂದ ಕೂಡಿರುವುದರಿಂದ, ದ್ವಂದಕ್ಕೆ ಆಸ್ಪದವಿಲ್ಲದಿರುವುದರಿಂದ ಹೆಚ್ಚು ಅನುವಾದಕಾರರು ಸಮರ್ಪಕ ಎನ್ನುವ ರೀತಿಯಲ್ಲಿ ಅನುವಾದಿಸುತ್ತಾರೆ. ಆದರೂ ಮಾಸ್ತಿ, ಯಗಟಿ, ಯಾಮುನಾಚಾರ್ಯ, ವಿರೂಪಾಕ್ಷಪ್ಪ, ದಿ ಸೈನ, ಉಷಾ ಫಾಲಾಕ್ಷಪ್ಪ, ಆರ್ಯ ಆಚಾರ್ಯ, ವೆಂಕಟ ರೆಡ್ಡಿ ದೇಸಾಯಿ ಅವರ ಅನುವಾದಗಳು ದೋಷದಿಂದ ಮುಕ್ತವಾಗಿಲ್ಲ. ಸಹಜವಾಗಿ ಹೇಳಬೇಕಾದದನ್ನು ಯಾಮುನಾಚಾರ್ಯ ಅವರು ಸುತ್ತಿ ಬಳಸಿ ಹೇಳುತ್ತಾರೆ. ಮಾಸ್ತಿಯವರು A needle of Crystal ಎಂದೂ The action lies within the ambit of words ಎಂದೂ ಅನಾವಶ್ಯಕ ಗೊಂದಲ ಮಾಡಿಕೊಳ್ಳುತ್ತಾರೆ. ಯಗಟಿ ಸ್ಫಟಿಕದ ಸಲಾಕೆಗೆ a bar of marble ಎಂದು ತಪ್ಪು ಅರ್ಥೈಸುತ್ತಾರೆ. ಹಕಾರಿ ಕೊನೆಯ ಸಾಲನ್ನು Where speech though perfect where life doesn't avow? ಎಂದು ಅದರ ಮೂಲ ಆಶಯವನ್ನೂ ತರಲು ವಿಫಲರಾಗುತ್ತಾರೆ. ಉಷಾ ಪಾಲಾಕ್ಷಪ್ಪ ಇಲ್ಲದ ವಿಚಾರಗಳನ್ನು ತೂರಿಸಿಬಿಡುತ್ತಾರೆ. ಪಿ.ಉಮಾಶಂಕರ ಒಂದು ಪದವನ್ನು ಅನುವಾದಿಸಲು ಒಂಭತ್ತು ಪದ ಬಳಸುತ್ತಾರೆ. ವಿರುಪಾಕ್ಷಪ್ಪ ಮುತ್ತಿನ ಹಾರವನ್ನು a garland of pearls

ಎಂದೂ ಶಬ್ದಶಃ ಅನುವಾದ ಮಾಡುತ್ತಾರೆ. ಒಟ್ಟಿನಲ್ಲಿ ವಚನದ ಆಶಯಕ್ಕೆ ಹತ್ತಿರವಿರುವ ಅನುವಾದಗಳೆಂದರೆ ಹಳಕಟ್ಟಿ, ಮೆನೆಜಿಸ್-ಅಂಗಡಿ, ಸಿ.ಎನ್.ಹಿರೇಮಠ, ರೊವೆನೆ ಹಿಲ್ಲ್-ಪ್ರಭುಶಂಕರ ಮತ್ತು ಶಿವಪ್ರಕಾಶ-ನಾಗಭೂಷಣ. ಇವರಲ್ಲೂ ಅಲ್ಲಲ್ಲಿ ಕೆಲವು ತಪ್ಪುಗಳು ನುಸುಳಿದ್ದರೂ ಒಟ್ಟು ಪರಿಣಾಮದ ದೃಷ್ಟಿಯಿಂದ ಇವರ ಅನುವಾದ ಶ್ಲಾಘನೀಯ. ಹಳಕಟ್ಟಿಯವರ ವಚನವನ್ನು ಮಾದರಿಯಾಗಿ ಪರಿಗಣಿಸಬಹುದು.

If you speak, your words should be like a string of pearls,
Your speech should have the luster of jewels,
[Your speech] should be like a bar of crystal.
The Linga witin you, pleased, should be saying,"Yes.yes."
Otherwise, How will Kudalasangama Deva be pleased with you?
(51) Halakatti

೨೬. ಬಡಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ!
ಮಾಲಗಾರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ!
ಬಣಜಿಗನೇಸು ಭಕ್ತನಾದಡೆಯೂ ಒಟ್ಟಿಲ ಬೆನಕನ ಹಂಗ ಬಿಡ!
ಕಂಚುಗಾರನೇಸು ಭಕ್ತನಾದಡೆಯೂ ಕಾಳಿಕಾದೇವಿಯ ಹಂಗ ಬಿಡ!
ನಾನು ಹಂಗಿನವನಲ್ಲ,ನಿಮ್ಮ ಶರಣರ ಹಂಗಿನವನಯ್ಯಾ
ಕೂಡಲ ಸಂಗಮದೇವಾ.

ವಚನ ಸಂಖ್ಯೆ-೪೫೧

ಈ ವಚನವನ್ನು ಕೇವಲ ಮೂವರು ವಿದ್ವಾಂಸರು ಅನುವಾದಿಸುತ್ತಾರೆ. ಶರಣ ಮಾರ್ಗದಲ್ಲಿಯ ತಮ್ಮ ನಿಷ್ಠೆಯನ್ನು, ಶರಣಮಾರ್ಗದ ಶ್ರೇಷ್ಠತೆಯನ್ನು ಬಸವಣ್ಣನವರು ಇಲ್ಲಿ ಬಿಂಬಿಸಿದ್ದಾರೆ. ಬೇರೆ ಬೇರೆ ಸಂಪ್ರದಾಯ ನಂಬಿಕೆಗಳ ಹಿನ್ನೆಲೆಯಿಂದ ಬಂದವರು ಶರಣಮಾರ್ಗವನ್ನು ಮನಸಾ ಒಪ್ಪಿ ಆಚರಿಸುತ್ತಿದ್ದಾಗಲೂ ತಮ್ಮ ಹಿಂದಿನ ರೂಢಿಯಿಂದ ಹೊರಬರಲಾಗದ ಸ್ಥಿತಿಗೆ ಕನ್ನಡಿ ಹಿಡಿಯುತ್ತದೆ. ಬ್ರಾಹ್ಮಣನಿಗೆ ಕೂಡ ಜನಿವಾರದ ಹಂಗು ದೂರವಾಗಲಾರದು. ಅದರಂತೆ ಮಾಲೆಗಾರ, ಬಣಜಿಗ, ಕಂಚುಗಾರರು ಕೂಡ ಭಕ್ತರಾಗಿಯೂ ತಮ್ಮ ಪೂರ್ವದ ದೈವಗಳ ಹಂಗಿನಿಂದ ಹೊರಬರಲಾರರು.

ಅತೀ ಕಡಿಮೆ ಜನರು ಅನುವಾದ ಮಾಡಿದ ಈ ವಚನವನ್ನು ವಿಶ್ಲೇಷಿಸುವಲ್ಲಿ ಅಂತಹ ಕಠಿಣ ಪರಿಶ್ರಮವಿರದಿದ್ದರೂ, ಯಗಟಿ ಬಡ ವಿಶೇಷಣವನ್ನು ಅನುವಾದಿಸುವ ಗೋಜಿಗೆ ಹೋಗುವದಿಲ್ಲ. ಸಿದ್ದಪ್ಪಾರಾಧ್ಯ ಮೆನೆಜಿಸ್/ಅಂಗಡಿಯವರ ಅವನ ಆರ್ಥಿಕ ಸ್ಥಿತಿಯನ್ನು ತೋರಿಸುತ್ತದೆ. ಆದರೆ ಇವರು Miserable Poor Brahmin ಎಂದೂ, ಇಲ್ಲವೆ Pitiable ಎಂಬ ಉಪಯೋಗದಿಂದ ಅವನ ದಯನೀಯ ಸ್ಥಿತಿಯನ್ನು ಬಣ್ಣಿಸಬಹುದಿತ್ತು.

ಯಗಟಿ ಅವರು ಕಂಚುಗಾರ ಎನ್ನುವುದನ್ನು a brass-hardware dealer ಎಂದು ತಪ್ಪು ಗ್ರಹಿಸುತ್ತಾರೆ. ಮೆನೆಜಿಸ್/ಅಂಗಡಿ ಅವರು ಒಟ್ಟಿಲ ಬೆನಕ ಪದವನ್ನು the lump of clay by a heap ಎಂದು ತಪ್ಪು ಗ್ರಹಿಸುತ್ತಾರೆ.

ನಾನು ಹಂಗಿನವನಲ್ಲ ಎನ್ನುವುದಕ್ಕೆ ಎರಡು ಅರ್ಥಗಳಿದ್ದು need /necessity ಮತ್ತು obligation ಇವುಗಳಲ್ಲಿ obligation ಇಲ್ಲಿ ಸರಿ ಹೊಂದುತ್ತದೆ. ಈ ಅಭಿವ್ಯಕ್ತಿಯನ್ನು ಯಗಟಿ Follow none of these ಎಂದೂ ಮೆನೆಜಿಸ್/ಅಂಗಡಿ ಅವರು have no regard ಎಂದು ತಪ್ಪಾಗಿ ಅರ್ಥೈಸುತ್ತಾರೆ. ಇದ್ದುದರಲ್ಲಿ ಸಿದ್ದಪ್ಪಾರಾಧ್ಯ I have no obligations of this type ಎಂದು ವಚನದ ಅರ್ಥದ ಸಮೀಪಕ್ಕೆ ಬರುತ್ತಾರೆ. ಒಟ್ಟಿನಲ್ಲಿ ಮೂವರೂ ಅಲ್ಪ ಸ್ವಲ್ಪ ಯಶಸ್ಸು ಕಂಡರೂ ಅದರ ಪೂರ್ಣ ಆಶಯ ತರಲು ಶಕ್ಯರಾಗುವುದಿಲ್ಲ. ಅದಕ್ಕಾಗಿ ಮಾದರಿಯಾಗಿ ಯಾವ ವಚನವನ್ನೂ ಕೊಡಲಾಗಿಲ್ಲ.

೨೭. ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೋ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೋ?
ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷ ತುಂಬಿ
ಮನದೊಳಗೆ [ಮನದೊ]ಡೆಯನಿದ್ದಾನೊ, ಇಲ್ಲವೋ?
ಇಲ್ಲ, ಕೂಡಲಸಂಗಮದೇವಾ.

ವಚನ ಸಂಖ್ಯೆ–೯೭

ಈ ವಚನವನ್ನು ೨೧ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ಮನೆಯ ರೂಪಕವೊಂದನ್ನು ನೀಡಿ ಅದನ್ನೇ ಸಾಧಕನಿಗೆ ಅನ್ವಯಿಸಿ ಅನುಭಾವ ತತ್ವವನ್ನು ಇಲ್ಲಿ ಬಿಂಬಿಸಲಾಗಿದೆ. ಮನೆಯ ಒಳಗೆ ಮನೆಯ ಒಡೆಯ ಇರುವನೋ ಇಲ್ಲವೋ ಎಂಬುದನ್ನು ಆ ಮನೆಯ ಸ್ಥಿತಿಗತಿಗಳಿಂದಲೇ ತಿಳಿಯಬಹುದು. ಹೊಸ್ತಿಲಲ್ಲಿ ಹುಲ್ಲು ಹುಟ್ಟಿದ್ದರೆ ಮನೆಯಲ್ಲಿ ಕಸ ಕಡ್ಡಿ ತುಂಬಿದ್ದರೆ ಅಲ್ಲಿ ಜನರು ವಾಸಿಸುತ್ತಾರೆ ಎಂದು ಹೇಗೆ ಹೇಳುವುದು? ಅದರಂತೆ ಮನುಷ್ಯನ ದೇಹ ಮತ್ತು ಮನಸ್ಸುಗಳೆರಡೂ ಸ್ವಚ್ಛವಾಗಿರದೇ ಹೋದರೆ ಪರಶಿವನು ಅಲ್ಲಿ ಹೇಗೆ ನೆಲೆ ನಿಲ್ಲಬಲ್ಲ? ಮನುಷ್ಯನ ದೇಹ ಮನಸ್ಸುಗಳೆರಡೂ ಸುಂದರವೂ ಸ್ವಚ್ಛವೂ ಆಗಿದ್ದರೆ ಮಾತ್ರ ಶಿವನು ತಾನಾಗಿಯೇ ಅಲ್ಲಿ ಬಂದು ನೆಲೆ ನಿಲ್ಲುತ್ತಾನೆ ಎಂದು ಇಲ್ಲಿ ತಿಳಿಸಲಾಗಿದೆ. ಮನೆಯೊಳಗೆ ಮನೆಯೊಡೆಯನಿಲ್ಲ– ಬದುಕಿನ ರಿಕ್ತಾವಸ್ಥೆಗೆ ಒಡ್ಡಿದ ಈ ಪ್ರತಿಮೆಯಲ್ಲಿ ಇದಾನೋ ಇಲ್ಲವೋ ಎಂಬ ಅನುಮಾನದಿಂದ ಪ್ರಾರಂಭವಾಗಿ ಇಲ್ಲ ಎಂಬ ನಿರ್ದಿಷ್ಟತೆಯಲ್ಲಿ ಕೊನೆಯಾಗುತ್ತದೆ.

ಬಹು ಸಂಖ್ಯೆ ವಿದ್ವಾಂಸರು ಈ ವಚನವನ್ನು ಯಶಸ್ವಿಯಾಗಿ ಅನುವಾದಿಸಿದ್ದಾರೆ. ವಚನ ತುಂಬಾ ಸರಳ, ಯಾವ ರೂಪಕವೂ ಇಲ್ಲದೆ ನೇರ ಮತ್ತು ಸಂಭಾಷಣೆ ರೂಪದಲ್ಲಿ ಇರುವುದರಿಂದ ,ಹೆಚ್ಚು ಜನರು ಇದರ ಅರ್ಥ ಮತ್ತು ಆಶಯವನ್ನು ಸರಿಯಾಗಿ ಗ್ರಹಿಸಿದ್ದಾರೆ. ಹಳಕಟ್ಟಿಯವರ ಅನುವಾದ ತನ್ನ ಸತ್ವ ಮತ್ತು ಆಕಾರವನ್ನು ಉಳಿಸಿಕೊಳ್ಳುವಲ್ಲಿ ಸಫಲವಾಗುತ್ತದೆ. ಮಾಸ್ತಿ, ಬಸವನಾಳ–ಅಯ್ಯಂಗಾರ, ಪಿ.ಶಾಮರಾವ್,

ವೆಲೆಬಿಲ್, ಸಿ.ಎನ್.ಹಿರೇಮಠ, ಪ್ರಧಾನ ಗುರುದತ್ತ, ಶಿವಪ್ರಕಾಶ್/ನಾಗಭೂಷಣ, ದಿ.ಸೈನ, ಡಿ.ಎ.ಶಂಕರ, ಉಷಾ ಪಾಲಾಕ್ಷಪ್ಪ, ಜಿ.ಎಸ್.ಅಮೂರ, ಅವರು ತಮ್ಮ ಅನುವಾದದಲ್ಲಿ ಹೆಚ್ಚು ಪಾಲು ಸರಿ ಮಾಡಿ ಒಂದೆಡೆಗೆ ಎಡವಿ ಅನುವಾದಕ್ಕೆ ಚ್ಯುತಿ ತರುತ್ತಾರೆ. ಆರ್ಯ ಆಚಾರ್ಯ ಅವರ ಅನುವಾದ ಅತ್ಯಂತ ಕಳಪೆ ಅನುವಾದಕ್ಕೆ ಮಾದರಿಯಾಗಿ ನಿಲ್ಲುತ್ತದೆ. ಯಗಟಿ, ರಾಮಾನುಜನ್, ಹಕರಿ–ಥಿಯೋಡೋರ, ಅನಂತನಾರಾಯಣ, ರೊವೆನೆ ಹಿಲ್–ಪ್ರಭುಶಂಕರ ಇವರುಗಳ ಅನುವಾದ ಮಾಡುವಲ್ಲಿ ಯಶಸ್ಸು ಕಾಣುತ್ತಾರೆ. ಅವರ ಪ್ರಯತ್ನ ಶ್ಲಾಘನೀಯ. ಇನ್ನು ಎಲ್ಲ ಅನುವಾದಗಳಲ್ಲಿ ಎಲ್ಲ ಕೋನಗಳಿಂದ ನೋಡಲಾಗಿ ಮೆನೆಜಿಸ್–ಅಂಗಡಿಯವರ ಅನುವಾದ ಉತ್ತಮ ಅನುವಾದವಾಗಿ ಹೊರಹೊಮ್ಮುತ್ತದೆ.

Is the master of the house gone out,Or is he in?

Upon the threshold grasses sprout;The house is just a bowl of dust :

Is the master of the house gone out,Or is he in?

When falsehood does infect your fleshAnd your heart is a sensuous mesh,

The master of the house cannot be in, cannot be in Kudala Sangama Lord!

Menezes -Angadi (97)

೨೮. ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ,
ಕೂಡಲಸಂಗಮದೇವಾ
ನಿಮ್ಮ ಚರಣಕಮಲದೊಳಗಾನು ತುಂಬಿ.

ವಚನ ಸಂಖ್ಯೆ–೪೯೨

ಈ ವಚನವನ್ನು ೧೮ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ದೇವರು ಮತ್ತು ಭಕ್ತನ ಸಂಬಂಧ ಈ ಪ್ರಸ್ತುತ ವಚನದಲ್ಲಿ ಅತ್ಯಂತ ಅರ್ಥಪೂರ್ಣವಾಗಿ ಮತ್ತು ಸೂಚ್ಯವಾಗಿ ಬಂದಿದೆ. ಪ್ರತಿಯೊಂದು ಮಾತು ದೇವರ ನಾಮವೇ ಎಮದು ಭಾವಿಸಿ ನೋಡುವ ನೋಟವೆಲ್ಲ ಆತನ ರೂಪವೇ ಎಂದು ಭಾವಿಸಿದರೆ ಎಲ್ಲವೂ ಶಿವನ ಸ್ಮರಣೆ, ಸೇವೆ ಮತ್ತು ಪೂಜೆ ಆಗುತ್ತವೆ. ಭಕ್ತನ ಮನದಲ್ಲಿ ಸದಾ ದೇವರ ನೆನಹು ಕಿವಿಯಲ್ಲಿ ದೇವರ ಕೀರ್ತಿ ತುಂಬಿಕೊಳ್ಳುವ ಭಕ್ತಿಯೇ ನೈಜವಾದದ್ದು. ಭಕ್ತಿಯ ಅತ್ಯಂತಿಕ ಸ್ಥಿತಿ ಎಂದರೆ ಭಕ್ತನು ದೇವರ ಚರಣಕಮಲದ ತುಂಬಿಯಾಗುವುದು ಮತ್ತು ಚರಣಕಮಲವನ್ನು ತುಂಬಿಕೊಳ್ಳುವುದು. ಇಲ್ಲಿ ಬಸವಣ್ಣವರು ತುಂಬಿ ಎಂಬ ಶ್ಲೇಷೆಯ ಮೂಲಕ ಭಕ್ತಿಯ ಸ್ವರೂಪವನ್ನು ಚೆನ್ನಾಗಿ ಮನಗಾಣಿಸುತ್ತಾರೆ.

ಈ ವಚನ ತುಂಬ ಅರ್ಥಗರ್ಭಿತ ಮತ್ತು ಸರಳ ಅನುವಾದಕನಿಗೆ ಮುದ ನೀಡುವ ಓದುಗನಿಗೆ ಲಯ ಕೊಡುವ ವಚನ. ಸಂಗನಾಳಮಠ, ಯಗಟಿ, ಬಾಗಿ, ಹಕಾರಿ/ಥಿಯೋಡೋರ್, ಪಿ.ಶಾಮರಾವ್, ಯಮುನಾಚಾರ್, ಸಿ.ಎನ್.ಹಿರೇಮಠ, ವೆಲೆಬಿಲ್, ಮಾತೆಮಹಾದೇವಿ, ಶಿವಪ್ರಕಾಶ–ನಾಗಭೂಷಣ, ಡಿ.ಎ.ಶಂಕರ, ಉಷಾಪಾಲಾಕ್ಷಪ್ಪಾ, ಆರ್ಯಆಚಾರ್ಯ, ವೆಂಕಟರೆಡ್ಡಿ ದೇಸಾಯಿ, ಇವರುಗಳು ಒಂದಿಲ್ಲೊಂದು ಹಂತದಲ್ಲಿ ವಚನದ ಆಶಯವನ್ನು ಕಟ್ಟಿಕೊಡುವಲ್ಲಿ ವಿಫಲರಾಗುತ್ತಾರೆ. ಕೆಲವರು fill my words, fill my speech ಎಂದು ಆಜ್ಞಾರ್ಥದಲ್ಲಿ ಅರ್ಥೈಸುತ್ತಾರೆ. ಕೆಲವರು ಶ್ಲೇಷಾರ್ಥವಾಗಿ ಬಳಸಲ್ಪಟ್ಟ ಕೊನೆಯ ಸಾಲಿನ ದುಂಬಿ ಪದದ ಅರ್ಥ ಗ್ರಹಿಸುವಲ್ಲಿ ಸೋತರೆ ಇನ್ನು ಕೆಲವರು ಉಳಿದ ಸಾಲುಗಳಲ್ಲಿ ತಪ್ಪು ಮಾಡುತ್ತಾರೆ. ಆರ್ಯಆಚಾರ್ಯ ಪಾದ ಕಮಲವನ್ನು lotus ಅನ್ನುವ ಬದಲು lily ಎಂದು ತಪ್ಪೆಸಗಿದ್ದರೂ, ಆ ಸಾಲಿನಲ್ಲಿ ಕವಿತ್ವವನ್ನು ತರಲು ಪ್ರಯತ್ನಿಸಿದ್ದಾರೆ. let me be hovering all over your lily feet a brimful bee ಇಲ್ಲಿ let me be, ಮತ್ತು a brimful bee ಎಂದು ಕಾವ್ಯತ್ಮಕವಾಗಿ ಬಳಸಿದ್ದಾರೆ. ಒಟ್ಟಿನಲ್ಲಿ ಈ ವಚನದ ಆಶಯವನ್ನು ಸಂಪೂರ್ಣವಾಗಿ ತರಲು ಮಾಸ್ತಿ, ರೊವೆನೆಹಿಲ್/ಪ್ರಭುಶಂಕರ, ಬಿ.ವಿರುಪಾಕ್ಷಪ್ಪ, ಮೆನೆಜಿಸ್–ಅಂಗಡಿ, ಅವರುಗಳು ಯಶಸ್ಸು ಕಾಣುತ್ತಾರೆ.

My tongue is filled with the nectar of Thy names;
My eyes are filled with Thy image
My mind is filled with thoughts of Thee
MY ears are filled with Thy fame,
My Lord Kudala Sangama,
I am a bee at your lotus feet Fused in Thyself.

Menezes -Angadi-491

೨೯. ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು.
ಕೊಂದಹರೆಂಬುದನರಿಯದೆ
ಬೆಂದ ಒಡಲ ಹೊರೆವುತ್ತಲದೆ.
ಅದಂದೆ ಹುಟ್ಟಿತ್ತು, ಅದಂದೆ ಹೊಂದಿತ್ತು.
ಕೊಂದವರುಳಿವರೆ ಕೂಡಲಸಂಗಮದೇವಾ.

ವಚನ ಸಂಖ್ಯೆ–೧೨೯

ಈ ವಚನವನ್ನು ೧೭ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ಹುಟ್ಟು ಸಾವುಗಳ ಚಕ್ರ ಮತ್ತು ಅವುಗಳ ಸಮಭಂಧವನ್ನು ಪ್ರತಿಯೊಬ್ಬ ಅನುಭಾವಿ ಚಿಂತಿಸುವುದು ಸಹಜ. ಬಸವಣ್ಣವರು ಈ ಚಿಂತನೆಯನ್ನು ಹರಕೆಯ ಕುರಿಯ ರೂಪಕದಲ್ಲಿ ವ್ಯಕ್ತಪಡಿಸಿದ್ದಾರೆ. ಹರಕೆಗಾಗಿ ತಂದ ಕುರಿ, ತನ್ನ ಬಲಿಯಾಗುವ ವಿಚಾರ ತಿಳಿಯದೆ ಅಲ್ಲಿ ಕಟ್ಟಿರುವ ತೋರಣದ ಎಲೆಗಳನ್ನು ತಿನ್ನಲು

ಯತ್ನಿಸುತ್ತದೆ. ಅದಕ್ಕೆ ಹೊಟ್ಟೆ ಹೊರೆದುಕೊಳ್ಳುವ ತಿನ್ನುವ ಅಗತ್ಯ ಇದ್ದರೆ ಅದನ್ನು ತಂದವರಿಗೆ ಬಲಿಕೊಡಬೇಕಾದ ಅಗತ್ಯವಿದೆ. ಬದುಕಲೆಂದು ತಿನ್ನುವ ಪ್ರಾಣಿಗೆ ಸಾವು ಎದುರಲ್ಲಿಯೇ ನಿಂತಿದೆ. ಒಂದು ತೆರನಲ್ಲಿ ಬದುಕೇ ಸಾವು ಸಾವೇ ಬದುಕು ಎಂಬುದನ್ನು ಈ ಚಿತ್ರಣದಲ್ಲಿ ಬಸವಣ್ಣನವರು ಹೇಳುತ್ತಾರೆ. ಪ್ರತಿ ಜೀವವೂ ಹುಟ್ಟಿನ ಜೊತೆಗೆ ಸಾವನ್ನೂ ಕಟ್ಟಿಕೊಂಡು ಬಂದಿರುವದನ್ನು ಬಲಿಯಾಗುವ ಕುರಿಯಿಂದ ಬಲಿ ಕೊಡುವವರು ಒಂದು ದಿನ ಹೊಂದುವ ಸಾವಿನಿಂದ ಕಂಡುಕೊಳ್ಳಬಹುದು.

ಈ ವಚನದಲ್ಲಿ ವಿಶ್ಲೇಷಣೆಗಾಗಿ ಮೂರು ಭಾಗಗಳನ್ನಾಗಿ ನೋಡಲಾಗಿ,

೧. ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು.

೨. ಕೊಂದಹರೆಂಬುದನರಿಯದೆ
ಬೆಂದ ಒಡಲ ಹೊರೆವುತ್ತಲದೆ.

೩. ಅದಂದೆ ಹುಟ್ಟಿತ್ತು, ಅದಂದೆ ಹೊಂದಿತ್ತು.
ಕೊಂದವರುಳಿವರೆ ಕೂಡಲಸಂಗಮದೇವಾ.

ಮೊದಲನೆಯ ಭಾಗದಲ್ಲಿ ಮಾಸ್ತಿ, ಬಸವನಾಳ–ಅಯ್ಯಂಗಾರ, ಯಗಟಿ, ಹಕಾರಿ/ಥಿಯೋಡೋರ್, ಮೆನೆಜಿಸ್–ಅಂಗಡಿ, ಎ.ಕೆ.ರಾಮಾನುಜನ್, ರೊವೆನೆಹಿಲ್–ಪ್ರಭುಶಂಕರ, ಅನಂತನಾರಾಯಣ, ಹೆಚ್.ಎಸ್.ಶಿವಪ್ರಕಾಶ, ವಿರುಪಾಕ್ಷಪ್ಪ, ಜಿ.ಎಸ್.ಅಮೂರ, ಡೋಣೂರಮಠ, ಅವರು ಆ ಸಾಲುಗಳ ಆಶಯವನ್ನು ಚೆನ್ನಾಗಿ ಅನುವಾದ ಮಾಡಿದರೆ, ಪಿ.ಶ್ಯಾಮರಾವ, ಸಿ.ಎನ್.ಹಿರೇಮಠ, ಪಿ.ಉಪಾಶಂಕರ, ಡಿ.ಎ.ಶಂಕರ, ದ ಸೈನ್, ಇವರು ಈ ಸಾಲುಗಳಲ್ಲಿ ಒಂದಿಲ್ಲೊಂದು ರೀತಿಯ ತಪ್ಪು ಎಸಗುತ್ತಾರೆ. ಡಿ.ಎ.ಶಂಕರ Goat ಅಥವಾ Lamb ಎನ್ನುವ ಬದಲು Heifer ಅಂತಾ ತಪ್ಪು ಬಳಸುತ್ತಾರೆ. The Sign ನಲ್ಲಿ ಉಪಯೋಗಿಸಿದ Graze ಹುಲ್ಲುಗೀರುವುದು ಎಂದು ಅರ್ಥಕೊಡುತ್ತದೆ. ಅದು Nibble ಆಗಬೇಕು.

ಎರಡನೇಯ ಭಾಗದಲ್ಲಿ ಕೊಂದಹಲೆಂಬ ಹೊರೆವುತ್ತಲದೆ ಎಂಬುದನ್ನು ಬಸವನಾಳ ಅಯ್ಯಂಗಾರ, ಮೆನೆಜಿಸ್ ಅಂಗಡಿ, ಎ.ಕೆ.ರಾಮಾನುಜ, ಸಿ.ಎನ್.ಹಿರೇಮಠ, ಅನಂತನಾರಾಯಣ, ರೊಹೆನೆಹಿಲ್ ಪ್ರಭುಶಂಕರ, ಶಿವಪ್ರಕಾಶ–ನಾಗಭೂಷಣ, ಡಿ.ಎ.ಶಂಕರ, ಡೋಣೂರಮಠ, ಜಿ.ಎಸ್.ಅಮೂರ ಅವರ ಆ ಸಾಲುಗಳು ವಚನದ ಆಶಯವನ್ನು ತರಲು ಸಫಲರಾಗುತ್ತಾರೆ. ಮಾಸ್ತಿ, ಯಗಟಿ, ಹಕಾರಿ, ಪಿ.ಶ್ಯಾಮರಾವ, ಪಿ.ಉಮಾಶಂಕರ, ವಿರುಪಾಕ್ಷಪ್ಪ, ದ ಶೈನ ಇವರು ಅದರ ಅರ್ಥ ಮತ್ತು ಆಶಯ ಗ್ರಹಿಸುವಲ್ಲಿ ಸೋಲುತ್ತಾರೆ.

ಮೂರನೇಯ ಭಾಗ ಅದರಲ್ಲೂ ವಚನದ ಮುಖ್ಯ ಅಂಶವನ್ನು (ಸತ್ವ) ಹಿಡಿದಿಟ್ಟ ಭಾಗದಲ್ಲಿ ಮಾಸ್ತಿ, ಬಸವನಾಳ ಅವರು ಈ ಭಾಗವನ್ನು ಅನುವಾದಿಸುವ ಗೋಜಿಗೆ ಹೋಗುವುದಿಲ್ಲ. ಮೆನೆಜಿಸ್–ಅಂಗಡಿ, ರಾಮಾನುಜ, ಅನಂತನಾರಾಯಣ, ರೊವೆನೆಹಿಲ್/ಪ್ರಭುಶಂಕರ, ವಿರುಪಾಕ್ಷಪ್ಪ, ಡಿ.ಎ.ಶಂಕರ, ಯಗಟಿ, ಹಕಾರಿ, ಪಿ.ಶ್ಯಾಮರಾವ, ಸಿ.ಎನ್. ಹಿರೇಮಠ, ಪಿ.ಉಮಾಶಂಕರ, ಡೋಣೂರಮಠ, ದ ಸೈನ ಇವರುಗಳು ವಚನದ ಆಶಯಕ್ಕೆ ಸಮೀಪ ಬರುತ್ತಾರೆ. ಇಲ್ಲಿ ಜಿ.ಎಸ್.ಅಮೂರ್‌ರವರ ಅನುವಾದವನ್ನು ಉದಾಹರಿಸಲಾಗಿದೆ.

Tied to the altar,

The sacrificial lamb

Ate the tender leaves

Hung in decoration.

Not knowing the axe

Would fall,it filled

Its burning belly.

That day it was born,

That day it died.

Did the killers live

O God KudalaSangama?

G.S.Amur 2008

೩೦. ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ,

ಸುರಗಿಯ ಮೊನೆಗಂಜೆ,

ಒಂದಕ್ಕಂಜುವೆ, ಒಂದಕ್ಕಳುಕುವೆ:

ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ.

ಮುನ್ನಂಜದ ರಾವಳನೇ ವಿಧಿಯಾದ!

ಅಂಜುವೆನಯ್ಯಾ, ಕೂಡಲಸಂಗಮದೇವಾ.

ವಚನ ಸಂಖ್ಯೆ–೪೪೭

ಈ ವಚನವನ್ನು ೧೫ ಜನ ವಿದ್ವಾಂಸರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ವಚನದ ಮೂಲ ಆಶಯ ಒಬ್ಬ ಸಾಧಕ ಹೇಗಿರಬೇಕು ಎನ್ನುವುದು. ಸದಾಚಾರ ಶುದ್ಧ ಚಾರಿತ್ರ್ಯಕ್ಕೆ ಬಸವಣ್ಣನವರು ಹೆಚ್ಚು ಮಹತ್ವವನ್ನು ಕೊಟ್ಟಿದ್ದಾರೆ. ಹರಿವ ಹಾವು, ಉರಿವ ನಾಲಗೆ, ಸುರಗಿಯ ಮೊನೆ ಇವುಗಳಿಗೆ ಅಂಜದ ಸಾಧಕ ಅಂಜಿ ಅಳುಕಬೇಕಾದದ್ದು ಪರಸ್ತ್ರೀ ಪರಧನವೆಂಬ ಜೂಬಿಗೆ. ಅವುಗಳಿಗೆ ಅಂಜದ ರಾವಣನು ಏವಿಧಿಯಾದ. ನಾನು ಮಾತ್ರ ಆ ಜೂಬಿಗೆ ಅಂಜುತ್ತೇನೆ ಎಂದು ತಮ್ಮ ಮನದಿಂಗಿತವನ್ನು ವ್ಯಕ್ತಪಡಿಸುತ್ತಾರೆ.

ಹರಿವ ಹಾವು ಇಲ್ಲಿ ಕಚ್ಚುವ ಹಾವು ಅದನ್ನು ಹಳಕಟ್ಟಿ–darting serpent; ಮಾಸ್ತಿ serpent that runs, ಬಸವನಾಳ–ಅಯ್ಯಂಗಾರ, ಥಿಯೋಡೊರ–ಹಕಾರಿ ಮತ್ತು ಯಗಟಿ creeping snake, ಮೆನೆಜಿಸ್–ಅಂಗಡಿ streaking snake, ಅನಂತನಾರಾಯಣ sliding snake, ಬೋಂದಾಡೆ deadly cobra, ಡೋಣೂರ ಮತ್ತು ಆಮೂರ slithering snake, ಡಿ.ಎ.ಶಂಕರ moving snake, ಪ್ರಯೋಗಿಸುವುದು ಹರಿವ ಹಾವು ಎನ್ನುವುದು ತಪ್ಪು ಅರ್ಥೈಸಿದಂತಿದೆ. ಆದರೆ ಸಂಗನಾಳಮಠರ biting

